# ಶ್ರೀ ಜಮನಾಲಾಲಜೀ

(ಜೀವನ ಪರಿಚಯ)

ಬರೆದವರು

**ಶ್ರೀ ಘನಶ್ಯಾಮದಾಸ ಬಿರ್ಲಾ**

ಕನ್ನಡಿಸಿದ್ದು

**ಎ. ವಿ. ಶ್ರೀನಿವಾಸಮೂರ್ತಿ**

ಗಾಂಧೀ ಸಾಹಿತ್ಯ ಭಂಡಾರ

ಬೆಂಗಳೂರು

೧೯೪೪

# ಬಿನ್ನಹ

ಶ್ರೀ ಶ್ರೀನಿವಾಸ ಮೂರ್ತಿಗಳು ಮೊನ್ನೆ ಮೊನ್ನೆ ಸೆರೆಯಲ್ಲಿದ್ದಾಗ ಶ್ರೀ ಬಿರ್ಲಾರ ಈ ಸರಸ ಗ್ರಂಥವನ್ನು ಕನ್ನಡಕ್ಕೆ ಅನುವದಿಸಿದಾರೆ. ಅವರ ಜೊತೆಗೆ ಅಲ್ಲೇ ಇದ್ದು ಅನುವಾದವನ್ನು ಕೇಳಿ ಆನಂದಿಸಿದ ಮೈಸೂರಿನ ಶ್ರೀ ಎಸ್. ಚೆನ್ನಯ್ಯನವರು ಇದನ್ನು ಮುದ್ರಿಸಿ ಕನ್ನಡ ಜನರ ಕೈಯಲ್ಲಿಡಲು ಎಲ್ಲ ನೆರವನ್ನೂ ಕೊಟ್ಟಿದ್ದಾರೆ. ಇವರಿಬ್ಬರಿಗೂ ನಾನು ಋಣಿ.

ಇದರೊಂದಿಗೆ ಶ್ರೀನಿವಾಸಮೂರ್ತಿಗಳು 'ವಿನೋಬಾ ವಿಚಾರ ಲಹರಿ'ಯನ್ನು ಕನ್ನಡಕ್ಕೆ ಅನುವದಿಸಿದಾರೆ. ಅದನ್ನು ಗಾಂಧೀ ಸಾಹಿತ್ಯದ ೯ನೆ ಗ್ರಂಥವಾಗಿ ಕೊಡುತ್ತೇನೆ.

**ಸಿದ್ದವನಹಳ್ಳಿ ಕೃಷ್ಣಶರ್ಮ**

# ಮುನ್ನುಡಿ

ಕೆಲವರು ಮುಸ್ಲಿಂ ಮುಲ್ಲಾಗಳಲ್ಲಿ ಒಮ್ಮೆ ಒಂದು ದೀರ್ಘ ಚರ್ಚೆ ನಡೆಯಿತು: ಮನುಷ್ಯ ಸತ್ತಮೇಲೆ ಸ್ವರ್ಗಕ್ಕೆ ಹೋಗುತ್ತಾನೋ ನರಕಕ್ಕೆ ಹೋಗುತ್ತಾನೋ, ತಿಳಿಯುವುದು ಹೇಗೆ? ದಿನಗಟ್ಟಲೆ ಚರ್ಚೆ ನಡೆದರೂ ಫಲವಿಲ್ಲವಾಯಿತು. ಯಾರಿಗೂ ಉತ್ತರ ಹೊಳೆಯಲಿಲ್ಲ. ಅಲ್ಲಿಗೆ ಹತ್ತಿರದಲ್ಲೇ ಒಬ್ಬ ಜಾಣ ಮುದುಕಿಯಿದ್ದಳು. ಒಳ್ಳೆ ಜ್ಞಾನಿ ಎಂದು ಆಕೆಗೆ ಹೆಸರಿತ್ತು. ಆಕೆಯ ಬಳಿ ಹೋಗಿ ಈ ಪ್ರಶ್ನೆಗೆ ಉತ್ತರ ಕೇಳೋಣ ಎಂದು ಎಲ್ಲರೂ ಸೇರಿ ತೀರ್ಮಾನಿಸಿದರು. ಆ ಮುದುಕಿಗೋ ಅತ್ಯಾಶ್ಚರ್ಯ. ಇಂಥ ಪ್ರಚಂಡ ಪಂಡಿತರು ಇಷ್ಟು ಅಲ್ಪ ವಿಚಾರಕ್ಕಾಗಿ ಉತ್ತರ ಬಯಸಿ ತನ್ನ ಬಳಿಗೆ ಬಂದರಲ್ಲ ಎಂದು ಆಕೆಗೆ ಸೋಜಿಗ ವಾಯಿತು. ಆ ಪ್ರಶ್ನೆಗುತ್ತರವಾಗಿ ಆಕೆ ಹೇಳಿದಳು: "ಸತ್ತವನು ಯಾರ ಮಧ್ಯೆ ಬಾಳಿದನೋ ಅವರು ಅವನ ಸಾವಿನ ಸುದ್ದಿ ಕೇಳಿ ಕಂಬನಿ ಸುರಿಸಿದರೆ, ಆತ ಮರೆಯಾದುದು ನಮಗೆ ಭರಿಸಲಾಗದ ನಷ್ಟ ಎಂದರೆ ಆತ ನಿಜವಾಗಿಯೂ ಸ್ವರ್ಗಕ್ಕೆ ಏರುತ್ತಾನೆ. ಸದ್ಯ, ಪೀಡೆ ಕಳೆಯಿತಲ್ಲ ಎಂದರೆ ಆ ಜೀವ ನರಕಕ್ಕೆ ಹೋಗುತ್ತಾನೆ." ತೀರ ಹತ್ತಿರದ ಬಳಗ ಗೆಳೆಯರು ಹಾಗಿರಲಿ, ಹಿಂದುಸ್ಥಾನದ ಜನಕೋಟಿಯಲ್ಲಿ ಎಷ್ಟು ಜನ — ಗುರುತಿದ್ದವರು ಇಲ್ಲದವರು — ಜಮನಾಲಾಲರ ಆಕಸ್ಮಿಕ ಅಕಾಲಮರಣದ ಸುದ್ದಿ ಕೇಳಿ ಕಂಬನಿ ಸುರಿಸಿಲ್ಲ! ಎಂಥ ಅಪಾರ ನಷ್ಟ, ಎಷ್ಟು ಘೋರ ಎಂದಿಲ್ಲ!

ಮಾನವಕೋಟಿಯನ್ನು ಉತ್ತಮಮಾರ್ಗಕ್ಕೆ, ಉನ್ನತಶೀಲಕ್ಕೆ ಸೆಳೆದೊಯ್ಯುವ ಜೀವ—ಶ್ರೇಷ್ಠ ಜೀವ, ಅವತಾರಪುರುಷ. ಅಂಥವರು ಜನಕ್ಕೆ ನೀಡುವ ಸ್ಫೂರ್ತಿ ಸ್ಫೂರ್ತಿ. ಭಗವಾನ್ ಬುದ್ಧ, ಯೇಸು, ಮಹಮ್ಮದ್, ಮಹಾತ್ಮಾ ಗಾಂಧೀ — ಎಲ್ಲರೂ ಅಂಥ ಅವತಾರ ಪುರುಷರು. ಇಂಥ ಶ್ರೇಷ್ಠಜೀವರ ಶಿಷ್ಯರಾಗುವುದೂ ಒಂದು ಸೌಭಾಗ್ಯ.

ಅದೂ ಒಂದು ಪುಣ್ಯ. ಶ್ರೀರಾಮಚಂದ್ರ ಅವತಾರವಾದರೆ ಆಂಜನೇಯನ ಅಮರನಾಮವೇನು ಕಡಮೆಯೆ? ಭಗವಾನ್ ರಾಮಕೃಷ್ಣ ಪರಮಹಂಸರು ಸಿದ್ಧ ಜೀವ, ಜೀವನ್ಮುಕ್ತರು. ಅವರ ಪಟ್ಟಶಿಷ್ಯ ವಿವೇಕಾನಂದಸ್ವಾಮಿಗೆ ಇಂದು ಭಾರತದೇಶ ಸಲ್ಲಿಸುತ್ತಿರುವ ಗೌರವ ಇತರರಿಗೆ ದೊರೆತೀತೆ? ಅವರಂತೆಯೆ ಮಹಾತ್ಮಾ ಗಾಂಧೀಜಿಗೆ ಜಮನಾಲಾಲಜೀ. ಮಹಾದೇವ ಭಾಯಿ ಗಾಂಧೀಜಿಯ ಬುದ್ಧಿಬಲವಾದರೆ ಜಮನಾಲಾಲಜೀ ಅವರ ಕ್ರಿಯಾಬಲ. ಒಬ್ಬರು ತಲೆ, ಇನ್ನೊಬ್ಬರು ಕೈಕಾಲು.

೧೯೪೦ರಲ್ಲಿ ನಾನು ಸೇವಾಗ್ರಾಮದಲ್ಲಿ ಕೆಲವುಕಾಲ ಇದ್ದಾಗ ಜಮನಾಲಲರ ಆಪ್ತಪರಿಚಯ ಭಾಗ್ಯ ನನಗೆ ಲಭಿಸುವ ಸುಯೋಗ ಒದಗಿತ್ತು. ಆದರೆ ಅವರು ಬಹುಕಾಲ ಆ ಭಾಗ್ಯವನ್ನು ನನಗೆ ಕೊಡಲಿಲ್ಲ. ಆ ಕಾಲಕ್ಕೆ ಪ್ರಾರಂಭವಾದ ವೈಯಕ್ತಿಕ ಸತ್ಯಾಗ್ರಹದಲ್ಲಿ ಅವರೂ ಧುಮುಕಿದರು. ನನಗಿನ್ನೂ ಆ ಪ್ರಸಂಗ ಚೆನ್ನಾಗಿ ನೆನಪಿದೆ. ಆ ದಿನ ಬೆಳಿಗ್ಗೆ ಅವರು ಸೇವಾಗ್ರಾಮದಲ್ಲಿ ಭಾಷಣ ಮಾಡಬೇಕಾಗಿತ್ತು. ಈ ವಿಷಯವನ್ನು ಕ್ರಮವಾಗಿ ಅಧಿಕಾರಿಗಳಿಗೆ ತಿಳಿಸಿದ್ದರು. ಜಮನಾಲಾಲರು ಹಿಂದಿನ ರಾತ್ರಿಯೇ ವರ್ಧಾದಿಂದ ಸೇವಾಗ್ರಾಮಕ್ಕೆ ಬಂದಿದ್ದರು. ಆ ರಾತ್ರಿ ಅಲ್ಲೇ ಕಳೆಯುವ ಆಸೆ ಅವರದು. ನಸುಕಿನಲ್ಲೆ ೪-೨೦ಕ್ಕೆ ಆಶ್ರಮಪ್ರಾರ್ಥನೆ ಪ್ರಾರಂಭ. ನಾನು ನಿತ್ಯದಂತೆ ೪ ಗಂಟೆಗೆ ಮೊದಲ ಘಂಟೆಗೇ ಎದ್ದೆ. ನಾ ಮಲಗುತ್ತಿದ್ದುದು ಮಹಾದೇವಭಾಯಿಯ ಗುಡಿಸಿಲ ಹೊರ ಜಗಲಿಯ ಮೇಲೆ. ಎದ್ದೊಡನೆ ಯಾವುದೋ ಒಂದು ಮೋಟಾರು ಬಂದ ಸದ್ದು ಕೇಳಿಬಂತು. ಎರಡು ಪ್ರಕಾಶಮಾನ ದೀಪಗಳ ಕಿರಣಪಂಗ್ತಿ ಕಾಣಬಂತು. ಏನೋ ವಿಶೇಷ ಬಂದೊದಗಿತೆಂದು ಎಲ್ಲರಿಗೂ ಅನಿಸಿತು. ಸುತ್ತಲೂ ಗುಸು ಗುಸು; ಕೊಂಚವೂ ಗದ್ದಲವಿಲ್ಲ, ಉದ್ರೇಕವಿಲ್ಲ. ಬಂದಿದ್ದ ಪೋಲೀಸಿನವರೂ ಚೆನ್ನಾಗಿ ನಡೆದುಕೊಂಡರು. ಪ್ರಾರ್ಥನೆ ಮುಗಿವತನಕ ನಮ್ಮ ಕಣ್ಣಿಗೆ ಕಾಣದ ಹಾಗೆ ದೂರವಿದ್ದು ತರುವಾಯ ತಮ್ಮ ಕೆಲಸವನ್ನು ಸದ್ದಿಲ್ಲದೆ ಮುಗಿಸಿದರು. ಜಮನಾಲಾಲರು ಆ ವಿಚಾರಣೆಯಲ್ಲಿ ಕೊಟ್ಟ ದಿಟ್ಟತನದ ಹೇಳಿಕೆ ನೆನಪಿರ ಬಹುದು. ಹೇಳದೆ ಕೇಳದೆ ಈ ವಿಶಾಲದೇಶವನ್ನು ಯುದ್ಧಕ್ಕೆ

ತಳ್ಳಿದುದನ್ನು ಖಂಡಿಸಿ, ದೇಶಗೌರವವನ್ನು ಎತ್ತಿಹಿಡಿದು, ಅಹಿಂಸೆಯನ್ನು ಸಮರ್ಥಿಸಿದರು.

ಜಮುನಾಲಾಲರ ಆರೋಗ್ಯ ಚೆನ್ನಾಗಿರಲಿಲ್ಲ. ನಾಗಪುರದ ಸೆರೆ ಮನೆಯಲ್ಲಿದ್ದಾಗಲೂ ಅವರ ಸ್ವಂತ ವೈದ್ಯರೇ ಅವರನ್ನು ನೋಡಿಕೊಳ್ಳು ತ್ತಿದ್ದರು. ನಮ್ಮ ದೇಶದ ರಾಜಕೀಯ ಕೆಲಸಗಾರರಲ್ಲಿ ಆರೋಗ್ಯದ ಕಡೆ ಅಸಡ್ಡೆ ಹೆಚ್ಚಿಹೋಗಿದೆ; ಅದೊಂದು ದೌರ್ಬಲ್ಯವೇ ಆಗಿ ಬೆಳೆಯು ತ್ತಿದೆ. ಪದೇಪದೇ ಸೆರೆಮನೆಯ ಯಾತ್ರೆ ಮಾಡುವುದರಿಂದ ಆರೋ ಗ್ಯವು ಕೆಡುವುದು ನಿಜವೇ ಆದರೂ, ಉಳಿದ ಹೊತ್ತಿನಲ್ಲೂ ಬಿಡುವೇ ಇಲ್ಲದೆ ಇಪ್ಪತ್ತು ನಾಲ್ಕು ಗಂಟೆಯೂ ಕೆಲಸದಲ್ಲಿ ತೊಡಗಿಕೊಂಡು ತಮ್ಮ ಆರೋಗ್ಯವನ್ನು ಅಸಡ್ಡೆ ಮಾಡುವುದು ಸುಳ್ಳಲ್ಲ. ಅದಕ್ಕೆ ವಿಶೇಷ ಪ್ರಾಯಶ್ಚಿತ್ತವೂ ಆಗುತ್ತದೆ. ಜಮುನಾಲಾಲಜೀ, ಮಹಾದೇವ ಭಾಯಿ ಇಬ್ಬರೂ ಎಷ್ಟು ವೇಗವಾಗಿ, ಎಷ್ಟು ನಿರಂತರವಾಗಿ ಕೆಲಸ ಮಾಡುತ್ತಿ ದ್ದರೋ, ಅವರ ಮನಸ್ಸು ಎಷ್ಟು ಭಾವಪೂರ್ಣವಾಗಿತ್ತೋ ಬಲ್ಲವರಿಗೆ ಅವರ ಆಕಸ್ಮಿಕ ಮರಣವೇನು ಅಚ್ಚರಿಯಲ್ಲ.

ಈ ವಿಷಯದಲ್ಲಿ ಬಾಪೂ ಸರಿ, ಎಲ್ಲರಿಗೂ ಒಂದು ಮೇಲ್ಪಂಗ್ತಿ. 'ಮೊಟ್ಟಮೊದಲು ಆರೋಗ್ಯ' ಎಂಬುದು ಅವರ ಶಾಶ್ವತ ಹಿತವಚನ. ಅವರ ಆರೋಗ್ಯವು ಏನು ಉತ್ತಮವಾಗಿಲ್ಲದಿದ್ದರೂ ದೇಶದ ನಾನಾ ಮೂಲೆಗಳಿಂದ ಆರೋಗ್ಯಹೀನ ಕೆಲಸಗಾರರನ್ನು ಕರೆಸಿ ಆಶ್ರಮದಲ್ಲಿಟ್ಟು ಕೊಂಡು ಅವರನ್ನು ಗುಣಮಾಡಿ ಸೇವಾಸಮರ್ಥರಾಗುವಂತೆ ಕಳಿ ಸುತ್ತಾರೆ. ನನಗೆ ಆ ಚಿಕಿತ್ಸಾ ಭಾಗ್ಯ ದೊರೆತಿತ್ತು. ಇನ್ನೂ ಅರ್ಧ ಮರ್ಧ ಗುಣವಾಗಿದ್ದಾಗ ಮೈಸೂರಿನ ಚುನಾವಣೆಗಳು ಬಂದವು. ನನಗೂ ಕರೆ ಬಂತು. ಆದರೆ ಬಾಪೂದು ಒಂದೇ ಉತ್ತರ: ಸಾಧ್ಯವಿಲ್ಲ. ಆದರೆ ಜಮುನಾಲಾಲರೂ ಮಹಾದೇವ ಭಾಯಿಯೂ ಬಾಪೂಗೆ ಇಂಥಾ ಅವಕಾಶವನ್ನೇ ಕೊಡಲಿಲ್ಲ. ವಿಚಾರಿಸಿ ನೋಡಿದರೆ ಆಯುಸ್ಸು ಮುಖ್ಯ ವೇ ಅನಿಸುತ್ತದೆ. ದೀರ್ಘಾಯುಸ್ಸೇ, ವಿಸ್ತಾರ ಕರ್ಮಜೀವನವೇ? ಯಾವುದು ಮುಖ್ಯ? ಆಯುಸ್ಸು ಕಿರಿದಾದರೂ ಮಾಡಿದ ಕಾರ್ಯ ಮಹತ್ತಾದುದು ಶಾಶ್ವತವಾದುದು ಆದರೋ?

ಜಮುನಾಲಾಲರು ಸಕಲಗುಣ ಸಂಪನ್ನರು. ಐಶ್ವರ್ಯ, ಸರಳತೆ, ವಿಶ್ವಾಸ, ಅತಿಥಿ ಸತ್ಕಾರ, ಔದಾರ್ಯ, ದೇಶಪ್ರೇಮ, ತ್ಯಾಗ, ದೈವಭಕ್ತಿ— ಎಷ್ಟು ಸದ್ಗುಣಗಳ ಸಮ್ಮೇಳನ! ಅವರ ಔದಾರ್ಯವನ್ನು ಅಳೆಯಬಲ್ಲವರಿಲ್ಲ. ವರ್ಧಾ ಕ್ಷೇತ್ರದಲ್ಲಿ ಅವರ ಪೋಷಣೆ ಪಾಲನೆಯಿಲ್ಲದ ರಾಷ್ಟ್ರೀಯ ಕಾರ್ಯಕ್ರಮ ಒಂದಾದರೂ ಇಲ್ಲ. ಅಖಿಲಭಾರತ ಗ್ರಾಮೋದ್ಯೋಗ ಸಂಘ, ಮಹಿಳಾಶ್ರಮ, ಗೋಸೇವಾಶ್ರಮ, ಚರಕಾಸಂಘ, ರಾಷ್ಟ್ರಭಾಷಾ ಸಮಿತಿ, ಚರ್ಮಾಲಯ, ಮಾರವಾಡೀ ವಿದ್ಯಾಲಯ — ಎಲ್ಲವೂ ಅವರು ನಾಟ ನೀರೆರೆದು ಬೆಳೆಸಿದ ಸಸಿ. ಸೇವಾಗ್ರಾಮ ತಾನೆ? ಅದೂ ಜಮುನಾಲಾಲಜೀ ಹಿಂದುಸ್ಥಾನಕ್ಕೆ ನೀಡಿದ ದಿವ್ಯ ದಾನ. ಆಚಂದ್ರಾರ್ಕಪರ್ಯಂತ ಅಮರವಾದ ದಾನ.

ಜಮುನಾಲಾಲರ ದಸ್ತಗಿರಿಯಾದಮೇಲೆ ಬಾಪೂ ಆಶ್ರಮವಾಸಿಗಳಿಗೆ ಅವರ ವಿಷಯ ತಿಳಿಸಿ ಹೇಳಿದರು. ಅದರ ಸಾರಾಂಶ: ಜಮುನಾಲಾಲಜೀ ತಮ್ಮ ಸಂಪತ್ತು ತಮ್ಮದೆಂದು ತಿಳಿದಿರಲಿಲ್ಲ. ಅದರ ರಕ್ಷಕರು ತಾವು ಎಂಬ ಭಾವನೆ ಅವರದು. ಆ ಸಂಪತ್ತೆಲ್ಲ ಜಗತ್ಕಲ್ಯಾಣಕ್ಕಾಗಿ ದತ್ತವಾದುದು. ನಿಜವಾಗಿ ಬಾಪೂ ಹೃದಯಸ್ಥರಾದ ಶ್ರೀಯುತರು ಯಾರಾದರೂ ಇದ್ದರೆ ಜಮುನಾಲಾಲರೊಬ್ಬರೇ.

ಅವರ ಪ್ರೀತಿ ವಿಶ್ವಾಸಕ್ಕೆ ಮೇರೆಯಿರಲಿಲ್ಲ. ಹೃದಯ ತುಂಬಿ ತುಳುಕುತ್ತಿತ್ತು. ನಾನಲ್ಲಿದ್ದಾಗ ಒಂದುಸಲ ಅವರ ಸೊಸೆ ತವರಿನಿಂದ ಹಿಂದಿರುಗಿ ಬಂದಳು. ಆಕೆ ಬರುವ ಮುನ್ನ ಮನೆಯಲ್ಲಿ ವಿಶೇಷ ಸಂಭ್ರಮ, ಉತ್ಸಾಹ. ಈ ಮನೆ ನನ್ನ ಸೊಸೆಯದು ಎಂದರು ಜಮುನಾಲಾಲಜೀ. ಆ ಮನೋಧರ್ಮದಲ್ಲಿ ಅಡಗಿರುವ ಸಮರಸ ಭಾವನೆ ಬಲು ದೊಡ್ಡದು. ಹಿಂದೂ ಕುಟುಂಬಗಳಲ್ಲಿರುವ ವಿರಸವನ್ನು ಅರಿಯದವರಾರು? ತವರೂರು ಬಿಟ್ಟು ಪರಗೃಹಕ್ಕೆ ಅಪರಿಚಿತಳಾಗಿ ಬರುವ ಸೊಸೆಗೆ ಅದು ಅಭಯದಾನ; ಉತ್ಸಾಹದಾನ. ಜಮುನಾಲಾಲರ ಹೃದಯ ವೈಶಾಲ್ಯಕ್ಕೆ ಪರಿಚಿತರು ಅಪರಿಚಿತರು ಎಂಬ ಭೇದವಿರಲಿಲ್ಲ. ವರ್ಧಾದಲ್ಲಿ ಅವರು ಊರ ಹೊರಗೆ ವಾಸವಾಗಿದ್ದ ಮನೆ ಬಜಾಜವಾಡಿ ಮನೆಯಲ್ಲ; ಚಿಕ್ಕದೊಂದು ವಿಸ್ತರಣ. ಅದರಲ್ಲಿ ಹಲವು ಸಂಸ್ಥೆ, ಹಲವು

ಕಾರ್ಯಕರ್ತರು. ಗಾಂಧೀ ಸೇವಾ ಸಂಘದ ಅಧ್ಯಕ್ಷರು ಕಾರ್ಯದರ್ಶಿ. ಅವರ ಕಾರ್ಯಾಲಯ ಅಲ್ಲೇ. ಚರಖಾ ಸಂಘದ ಅಧ್ಯಕ್ಷರು, ಗ್ರಾಮ ಸೇವಾ ಸಂಘದ ಕಾರ್ಯದರ್ಶಿ ಅಲ್ಲೇ. ರಾಷ್ಟ್ರನಾಯಕರ ಅತಿಥಿ ಭವನ ಅಲ್ಲೇ. ಸೇವಾಗ್ರಾಮದ ಮಹರ್ಷಿಯ ದರ್ಶನಕ್ಕೆ ಅವರಿಗೆ ಇದೇ ಮಹಾದ್ವಾರ; ಮೊದಲ ಮಜಲು. ಜಮನಾಲಾಲರು ಜನರ ಗುಂಪಿನ ನಡುವೆ ಇದ್ದರೆ ಮೊದಲಸಲ ಅತಿಥಿಯಾಗಿ ಬಂದವನಿಗೆ ಯಾರು ಆತಿಥ್ಯ ಮಾಡಿದವರು ಎಂಬುದು ಗೊತ್ತಾಗುತ್ತಿರಲಿಲ್ಲ. ಅಷ್ಟು ನಿರಾಡಂಬರ ಅವರದು. ದೇಶಸೇವಕರಿಗೆ ತಕ್ಕ ಅನುಕೂಲ ಮಾಡಿಕೊಡುವ ಅಗತ್ಯ ವನ್ನು ಅವರಹಾಗೆ ಆರಿತವರು ಮತ್ತೊಬ್ಬರಿರಲಿಲ್ಲ.

ವ್ಯವಹಾರದಲ್ಲಿ ತೊಡಗಿದವರು ಸಾರ್ವಜನಿಕ ಕಾರ್ಯಕ್ಕೆ ತಮಗೆ ಬಿಡುವೆ ಇಲ್ಲವೆಂದು ಹೇಳುವುದನ್ನು ಕೇಳಿದೇನೆ. ಜಮನಾಲಾಲರು ನಿರಂತರವಾಗಿ ನಡಸುತ್ತಿದ್ದ ಸಾರ್ವಜನಿಕ ಸೇವೆಯನ್ನು ಕೇಳಿ ಇಂಥ ವರು ಏನೆನ್ನುವರೋ? ಅವರ ವ್ಯವಹಾರವೂ ಏನು ಚಿಕ್ಕದಲ್ಲ. ಅದರ ಜೊತೆಗೆ ಕಾಂಗ್ರೆಸ್, ಜಯಪುರ ಪ್ರಜಾಮಂಡಲಿ, ಸಂಸ್ಥಾನಗಳ ಪ್ರಜಾ ಪರಿಷತ್ತು—ಮೇಲೆ ಹೇಳಿದ ಹತ್ತಾರು ರಚನಾತ್ಮಕ ಸಂಸ್ಥೆ. ಒಂದು ಗಳಿಗೆ ವ್ಯರ್ಥವಾದುದಿಲ್ಲ. ಹಾಳು ಹರಟೆಯಿಲ್ಲ; ಸೋಮಾರಿತನವಿಲ್ಲ. ನಮ್ಮ ದೇಶಕ್ಕೆ ಈ ಕರ್ಮಶೀಲತೆ ಅಭ್ಯಾಸವಾಗಬೇಕಾದ ಮುಖ್ಯಗುಣ.

ತಮ್ಮ ಹಕ್ಕುಬಾಧ್ಯತೆಯೇನು ಎಂಬುದನ್ನು ತಿಳಿಯದೆ ಜೀವಚ್ಛವ ಗಳಾಗಿದ್ದ ಜನ ಜಂಗುಳಿಗೆ ಜೀವ ತುಂಬುವ ಮಹಾಕಾರ್ಯವೊಂದೇ ಅಲ್ಲ ಬಾಪೂ ಮಾಡಿದ್ದು; ಚಿಕ್ಕ ದೊಡ್ಡ ವರ್ತಕರನ್ನು ಕೋಟ್ಯಾ ಧೀಶರನ್ನು ರಾಷ್ಟ್ರಸೇವೆಗೆ ಸಂಪೂರ್ಣವಾಗಿ ಎಳೆದರು. ಅಂಥವರಲ್ಲಿ ಜಮನಾಲಾಲಜೀ ಶ್ರೇಷ್ಠರು. ವ್ಯಾಪಾರ ಹಣ ಎಂದರೆ ಸರಕಾರ ದೊಡನೆ ಸಾವಿರ ಸಂಬಂಧ. ಆದರೂ ಜಮನಾಲಾಲರಿಗೆ ಭಯವಾಗಲಿ ಸ್ವಾರ್ಥವಾಗಲಿ ಇರಲಿಲ್ಲ. ಕಾಂಗ್ರೆಸ್ಸಿನಲ್ಲಿ ಸಾನುಭೂತಿಯುಳ್ಳ ವರ್ತ ಕರು ಹಣವಂತರು ಕಡಿಮೆಯಿಲ್ಲ. ಸರಕಾರದ ಸಿಟ್ಟಿಗೆ ಹೆದರದೆ ಬಹಿ ರಂಗವಾಗಿ ಅದನ್ನು ತೋರಿಸುವವರು ಮಾತ್ರ ಅತಿ ವಿರಳ. ಬಜಾಜ ರಂಥ ಮಹಾನುಭಾವರು ಇನ್ನೂ ಹಲವರು ಇರಬಾರದೆ?

ಈ ಜೀವನ ಚಿತ್ರದಲ್ಲಿ ಬಜಾಜರ ಪ್ರಿಯ ಪತ್ನಿ ಜಾನಕೀದೇವಿ ಪ್ರಧಾನ ಪಾತ್ರ. ಅದು ಸರಿ. ಆಕೆ ಪತ್ಯನುಕೂಲೆ. ದುರ್ಬಲ ಶರೀರವಾದರೂ ದೊಡ್ಡ ಸಂಸಾರಕ್ಕೆ ಯಜಮಾನಿ ; ಸಾಲದ್ದಕ್ಕೆ ಗಂಡನ ನೂರಾರು ಚಳುವಳಿ. ರಾಷ್ಟ್ರಸೇವೆಗೆ ವ್ಯಕ್ತಿಗಳನ್ನು ಅಣಿಮಾಡುವ ಶಕ್ತಿ ರಾಷ್ಟ್ರ ನಾಯಕರಿಗೆ ಸಹಜ. ಬಾಪೂ ಮಾತ್ರ ಇಡೀ ಕುಟುಂಬಗಳಿಗೇ ಸೇವಾದೀಕ್ಷೆ ಕೊಡುತ್ತಾರೆ. ಕಡೆಗೆ ದೊಡ್ಡದೊಂದು ಗಾಂಧೀ ಕುಟುಂಬವನ್ನೆ ಕಟ್ಟುತ್ತಾರೆ. ಇಂಥ ಪ್ರಯೋಗವನ್ನು ಇತಿಹಾಸದಲ್ಲೆ ಯಾರೂ ಮಾಡಿಲ್ಲ.

ಜಮುನಾಲಾಲರು ಸೆರೆಯಲ್ಲಿದ್ದಾಗ ಜಾನಕೀಬಾಯಿಗೂ ಅವರ ಮಗಳಿಗೂ ಬಾಪೂ ಚಿಕಿತ್ಸೆ ಪ್ರಾರಂಭಿಸಿದರು. ಅದ್ಭುತ ಫಲ! ನನಗೇನು ಆಶ್ಚರ್ಯವಲ್ಲ. ನಾನೇ ರೋಗಿಯಾಗಿ ಆಶ್ರಮಕ್ಕೆ ಹೋಗಿದ್ದೆ. ಒಂದು ಬಿಡಿಕಾಸಿನ ಮದ್ದೂ ಇಲ್ಲದೆ ಮೂರುತಿಂಗಳಲ್ಲಿ ಬಾಪೂ ನನಗೆ ಗುಣ ಮಾಡಿದರು. ತೀರ ಉಲ್ಬಣಾವಸ್ಥೆಗೆ ಬಂದ ರೋಗಿಗಳಿಗೆ ಆರೈಕೆಮಾಡುವುದು ಬಾಪೂಗೆ ಒಂದು ಅಭಿರುಚಿ. ಎಷ್ಟೋ ಜನಕ್ಕೆ ಇದು ಗೊತ್ತಿಲ್ಲ. ಒಮ್ಮೆ ಬಾಪೂ ಬಳಿ ರೋಗಿಯಾಗಿ ಹೋದರೆ ತಿಳಿದೀತು.

ಈ ಪುಸ್ತಕ ಬರೆದ ಶ್ರೀ ಬಿರ್ಲಾ ನುರಿತ ಲೇಖಕರು. ಅವರ 'ಬಾಪೂ' ಹಿಂದೀ ಸಾಹಿತ್ಯದಲ್ಲಿ ಶ್ರೇಷ್ಠ ಕೃತಿ. ಈ ಪುಸ್ತಕವೂ ಅಂಥದೇ ಮತ್ತೊಂದು ಶ್ರೇಷ್ಠದಾನ. ನನ್ನ ಮಿತ್ರರು ಶ್ರೀ ಶ್ರೀನಿವಾಸಮೂರ್ತಿಗಳು ಇದನ್ನು ಕನ್ನಡಿಸಿ ಕನ್ನಡಿಗರಿಗೆ ಉಪಕಾರಮಾಡಿದಾರೆ. ಅನುವಾದ ಬಹಳ ಸರಸವಾಗಿದೆ. ಸ್ವತಂತ್ರ ಎನ್ನುವಂತಿದೆ.

ಜೀವನ ಚರಿತ್ರೆಗಳು ಯಾವ ಸಾಹಿತ್ಯದಲ್ಲೇ ಆಗಲಿ ಸ್ಫೂರ್ತಿದಾಯಕ. ಅದರಲ್ಲೂ ಸ್ವಾತಂತ್ರ್ಯಸಂಗ್ರಾಮ ನಿರತರಾಗಿರುವ ನಮಗೆ ಇಂಥ ರಾಷ್ಟ್ರವೀರರ ಜೀವನಚರಿತ್ರೆಗಳು ಅತ್ಯಗತ್ಯ.

ಜಮುನಾಲಾಲರು ಅಂಥದೊಂದು ಮಹಾ ಜೀವ. ಅವರ ಚರಿತ್ರೆ ಮನೆಮನೆಗೂ ವ್ಯಾಪಿಸಲಿ ಎಂದು ಹಾರಯಿಸುತ್ತೇನೆ.

**ಹಿರಳ್ಳಿ ದಾಸಪ್ಪ.**



ಬಜಾಜರ ಪತ್ನಿ ಜಾನಕಿದೇವಿ

# ೧

೧೯೧೨ರ ಮಾತು. ಬೊಂಬಾಯಿ ಮಾರವಾಡಿ ಪಂಚಾಯಿತಿ ಕಟ್ಟಿಯಲ್ಲಿ ಮಾರವಾಡಿ ಮುಂದಾಳುಗಳ ಆಲೋಚನಾಸಭೆ ಒಂದು ಸೇರಿತ್ತು. ಬೊಂಬಾಯಲ್ಲಿ ಮಾರವಾಡಿ ವಿದ್ಯಾಲಯ ಒಂದನ್ನು ಸ್ಥಾಪಿಸುವ ವಿಚಾರ ನಡೆದಿತ್ತು. ಮಾರವಾಡಿ ಸಮಾಜದ ಶ್ರೀಮಂತರೂ ವೃದ್ಧರೂ ಬಂದಿದ್ದರು. ಅವರಲ್ಲಿ ಒಬ್ಬರಾದರೂ ಶಾಲೆಯಲ್ಲಿ ಕಲಿತವರಲ್ಲ. ಈ ವಿಷಯದಲ್ಲಿ ಏನುಮಾಡಬೇಕೋ ಅವರಲ್ಲಿ ಯಾರಿಗೂ ತಿಳಿದಿರಲಿಲ್ಲ. ಹಣ ಕೂಡಿಸಬೇಕೆಂಬುದು ಮಾತ್ರ ಎಲ್ಲರಿಗೂ ಗೊತ್ತಿತ್ತು.

ಸಭೆಯಲ್ಲಿ ನಾನಾ ಬಗೆಯ ಜನ ಇದ್ದರು. ಅಪ್ರಸಕ್ತ ಮಾತುಕತೆ ಸಹ ನಡೆಯುತ್ತಿತ್ತು. ವಿಷಯಾಂತರವೂ ಆಗುತ್ತಿತ್ತು. ಆದರೆ ಅವರಲ್ಲಿ ಒಬ್ಬ ಯುವಕನಿದ್ದ. ಆತ ಬಾಯಿ ಬಿಟ್ಟನೆಂದರೆ ಸಾಕು ಎಲ್ಲರೂ ಗಮನವಿಟ್ಟು ಆ ಮಾತು ಕೇಳುತ್ತಿದ್ದರು. ನಾನೂ ಆತನನ್ನು ದೃಷ್ಟಿಸಿ ನೋಡಿದೆ. ಆತ ಪೂರ್ಣ ಯುವಕ. ಇಪ್ಪತ್ತೈದಕ್ಕೂ ಕಡಮೆ ವಯಸ್ಸು. ಗೌರವರ್ಣ, ಸ್ಥೂಲಕಾಯ, ಗುಂಡು ಮುಖ; ಮೈಮೇಲೆ ರೇಶ್ಮೆ ಅಂಗಿ, ತಲೆಯ ಮೇಲೆ ಕಾಶ್ಮೀರಿ ಕಸೂತಿ ಟೋಪಿ. ಖಾದಿಯ ಕಲ್ಪನೆಯೇ ಆಗ ಯಾರಿಗೂ ಇರಲಿಲ್ಲ. ಜಪಾನೀ ಬಟ್ಟೆಯ ತ್ಯಾಗ ಕೂಡ ಸ್ವದೇಶೀ ಪರಿಭಾಷೆಯಲ್ಲಿ ಸೇರಿರಲಿಲ್ಲ. ಆದುದರಿಂದ ಆ ಯುವಕನ ವೇಷಭೂಷಣಗಳಲ್ಲಿ ಒಂದೂ ಸ್ವದೇಶಿಯಾಗಿರಲಿಲ್ಲ. ಠೀವಿ ಶ್ರೀಮಂತತನದ್ದು. ಮುಖವೇನೋ ಕೋಮಲವಾಗಿತ್ತು ಆಗ. ಕಣ್ಣಿನಿಂದ ಸರಳತೆ, ಒಂದು ಬಗೆಯ ಕಾಂತಿ ಹನಿಯುತ್ತಿತ್ತು. ಅಷ್ಟೇನೂ ವಿದ್ಯಾವಂತನಂತೆ ಕಾಣುತ್ತಿರಲಿಲ್ಲ; ಆದರೂ ಮಾತಿನಲ್ಲಿ ನಿರ್ಭಯ, ಪೂರ್ಣ ಆತ್ಮವಿಶ್ವಾಸ ಕಾಣುತ್ತಿತ್ತು. ಜನರ ಮೇಲೆ ಆತ ತನ್ನ ಪ್ರಭಾವ ಬೀರುತ್ತಿದ್ದ.

ಆಗ ನಾನು ಆ ಯುವಕನಿಗಿಂತ ಚಿಕ್ಕವನು. ವಯಸ್ಸು ಇಪ್ಪತ್ತಕ್ಕೂ ಕಡಮೆ ಇತ್ತು. ನನಗಿಂತ ವಯಸ್ಸಿನಲ್ಲಿ ಸ್ವಲ್ಪವೇ ದೊಡ್ಡವನಾದ ಆ ಯುವಕ ಆತ್ಮವಿಶ್ವಾಸ, ಅನುಭವ, ಪ್ರಭಾವ ಪೂರ್ಣವಾಗಿ ಆಡುತ್ತಿದ್ದ ಮಾತು ಕೇಳಿ ನನಗೆ ಈರ್ಷೆ ಆದಂತಾಯಿತು. ಯಾರು

ಆ ಯುವಕ ಎಂದು ಯಾರನ್ನೋ ಕೇಳಿದೆ. ಆತ ಜಮನಾಲಾಲ್ ಬಜಾಜ್ ಎಂದು ತಿಳಿಯಿತು. ಹಳ್ಳಿಯಲ್ಲಿರುವವನು; ಸಾಧಾರಣ ವಿದ್ಯಾವಂತ; ಇಷ್ಟು ಚಿಕ್ಕ ವಯಸ್ಸಿನಲ್ಲೇ ಸಾರ್ವಜನಿಕ ಕೆಲಸದಲ್ಲಿ ಇಷ್ಟು ಶ್ರದ್ಧೆ, ಪ್ರಾಮಾಣಿಕವಾದ ಆಸಕ್ತಿ ಇದನ್ನೆಲ್ಲ ನೋಡಿ ನನಗೆ ಸ್ವಲ್ಪ ಆಶ್ಚರ್ಯ, ಕೊಂಚ ಕುತೂಹಲ ಉಂಟಾಯಿತು. ಸಣ್ಣ ಬೀಜ ಮೊಳೆತು ಹೆಮ್ಮರವಾಗಬಹುದೆಂಬ ಅರಿವು ನನಗೆ ಆಗಿನ್ನೂ ಇರಲಿಲ್ಲ.

ಸರಿ, ಅಂದಿನಿಂದಲೇ ನನಗೂ ಜಮನಾಲಾಲರಿಗೂ ಪರಿಚಯ ಮೊದಲು. ಅಂದು ಆದ ಸ್ನೇಹ ದಿನೇದಿನೇ ಬೆಳೆಯುತ್ತ ಬಂತು. ಹಿಂದಿನದನ್ನು ನೆನೆದರೆ ನಮ್ಮ ಕಣ್ಣುಮುಂದೆ ಒಂದು ಚಿತ್ರಪಟ ಹಾದು ಹೋದಂತೆ ಅನಿಸುತ್ತದೆ. ಚಲನಚಿತ್ರದ ಕಟ್ಟಕೊನೆಯಲ್ಲಿ ನೋಡಿದ ಭಾಗ ಹಾಗೆಯೇ ನಮ್ಮ ಕಣ್ಣಿಗೆ ಕಟ್ಟಿ ನಿಂತಿರುತ್ತದೆ. ನಮ್ಮ ಕಣ್ಣ ಮುಂದೆ ಹಾದುಹೋದ ಹಿಂದಿನ ಚಿತ್ರದ ರೂಪುರೇಖೆ ಮಸಕುಮಸಕಾಗಿ ನಮ್ಮ ಮನಸ್ಸಿನ ಮುಂದಿರುತ್ತದೆ. ಇದಲ್ಲದೆ ಆ ಚಲನಚಿತ್ರದ ಸಂಪೂರ್ಣ ನೋಟ ನಮ್ಮ ಮನಸ್ಸಿನ ಮೇಲೆ ಬಂದು ಪ್ರತ್ಯೇಕವಾದ, ಹೆಚ್ಚು ಸ್ಥಾಯೀಮುದ್ರೆಯನ್ನು ಒತ್ತುತ್ತದೆ. ಯುವಕ ಜಮನಾಲಾಲರ ರೂಪು ನಮ್ಮ ಕಣ್ಣಮುಂದೆ ಇಂದು ಅಸ್ಪಷ್ಟವಾಗಿದೆ. ನಮಗೆ ಪದೇ ಪದೇ ಗೋಚರವಾಗುತ್ತಿರುವುದು ಅವರ ಅಂತಿಮಚಿತ್ರ. ನಮ್ಮೆಲ್ಲರ ಹೃದಯಪಟದಲ್ಲಿ ಸರ್ವದಾ ಅಂಕಿತವಾಗಿರುವುದು ಅವರ ರೂಪವಲ್ಲ; ಅವರ ನಿರ್ಮಲ ಚಾರಿತ್ರ್ಯ.

೧೯೪೨ನೇ ಫೆಬ್ರುವರಿ ೧೧ನೆ ತಾರೀಖು ಮಧ್ಯಾಹ್ನ ಅಕಸ್ಮಾತ್ ವರ್ಧಾದಿಂದ ಟೆಲಿಫೋನ್ ಬಂತು. ಜಮನಾಲಾಲರಿಗೆ ಒಂದುಸಲ ವಾಂತಿಯಾಗಿ ಪ್ರಜ್ಞೆ ತಪ್ಪಿದ್ದಾರೆಂದು ತಿಳಿಯಿತು.

೧೫ ನಿಮಿಷದಿಂದ ಪ್ರಜ್ಞೆ ತಪ್ಪಿದ್ದಾರೆಂದು ಕೇಳಿ ಮನಸ್ಸಿಗೆ ಸ್ವಲ್ಪ ವ್ಯಾಕುಲವಾಯಿತು; ಆದರೆ ಹೆಚ್ಚು ಗಾಬರಿ ಏನೂ ಆಗಲಿಲ್ಲ. ಸಾಮಾನ್ಯ ಅಜೀರ್ಣವಿರಬಹುದೆಂದು ನಾವೆಲ್ಲ ಭಾವಿಸಿದೆವು. ಗಾಂಧೀ ಜಿಗೆ ಜಮನಾಲಾಲರ ಅಸ್ವಸ್ಥತೆಯ ವಿಚಾರ ತಿಳಿಸಿದೆವು. ತಕ್ಷಣ ಅವರು ವರ್ಧಾಕ್ಕೆ ಹೊರಡಲು ಅನುವಾದರು. ನಾನು ಹೋಗಲೇಬೇಕಾಗಿತ್ತು.

ನಾನು ಕೇಳಿದೆ "ವಿಶೇಷ ಕಾಯಿಲೆ ಏನೂ ಇಲ್ಲ ತಾನೆ?"

ಗಾಂಧೀಜೀ ಹೇಳಿದರು "ರಕ್ತದ ಒತ್ತಡವಂತೂ ಅವರಿಗೆ ಇದ್ದೇ ಇತ್ತು, ಏನೋ! ಯಾರು ಬಲ್ಲರು? ಊಟದಲ್ಲಿ ಸ್ವಲ್ಪ ವ್ಯತ್ಯಾಸವಾದಂತೆ ಕಾಣುತ್ತದೆ. ಬಜಾಜರೊಡನೆ ನಮಗೆ ಭೇಟಿಯಾಗದಿದ್ದರೆ ಅನರ್ಥ ವಾದೀತು."

ರಕ್ತದ ಒತ್ತಡ ಹೆಚ್ಚಾಗಿದೆ; ಎಚ್ಚರ ತಪ್ಪಿದೆ ಎಂದು ಕೇಳಿ ನನಗೆ ಗಾಬರಿಯಾಯಿತು. ಆದರೆ ಮನಸ್ಸಿನ ಆಸೆ ಚಿಂತೆಗೆ ಆಸ್ಪದವನ್ನು ಕೊಡಲಿಲ್ಲ.

ನಾವಿಬ್ಬರೂ ಮೋಟಾರಿನಲ್ಲಿ ಹೊರಟೆವು. ದಾರಿಯುದ್ದಕ್ಕೂ ಜಮುನಾಲಾಲರ ಚಿತ್ರ ನಮ್ಮ ಕಣ್ಣಮುಂದೆ ಬಾರಿಬಾರಿಗೂ ಸುಳಿಯು ತ್ತಿತ್ತು. ಮೊನ್ನೆ ಬಂದಿದ್ದರು, ನಾಳೆ ಬರುತ್ತೇನೆಂದು ಹೇಳಿ ಹೋಗಿ ದ್ದರು. ಇಷ್ಟರಲ್ಲೇ ಅತ್ಯುಗ್ರರೋಗ ಬಂದಿತೇ? ಸಾಧ್ಯವೇ? ಇಲ್ಲ, ನಾವು ಅಲ್ಲಿಗೆ ಹೋಗುವ ಮುನ್ನ ಜಮುನಾಲಾಲರೇ ನಗುನಗುತ್ತ ಬಂದು ನಮ್ಮನ್ನು ಇದಿರುಗೊಂಡಾರು.

ನಾನು ಹೇಳಿದೆ: "ಬಾಪು, ಇವರನ್ನು ಆಶ್ರಮಕ್ಕೆ ಕರೆ ದೊಯ್ಯಲೇಬೇಕು."

"ಆಗಲಿ, ಸ್ವಲ್ಪ ಗುಣವಾದಮೇಲೆ ಹಾಗೆಯೇ ಮಾಡೋಣ. ಈ ಆಶ್ರಮ ಒಂದು ಬಗೆಯಲ್ಲಿ ಸೆರೆಮನೆ ಇದ್ದಂತೆ. ಇಲ್ಲಾದರೆ ಜಮುನಾ ಲಾಲರು ಹಿಡಿತಡೆಯಿಂದ ಪಥ್ಯವಾಗಿರಬಲ್ಲರು. ವಿಶ್ರಾಂತಿಗೆ ಇದೇ ತಕ್ಕ ಸ್ಥಳ."

ಸೇವಾಶ್ರಮದಿಂದ ವರ್ಧಾಕ್ಕೆ ೧೫ ನಿಮಿಷದ ಪ್ರಯಾಣ. ದಾರಿ ಯುದ್ದಕ್ಕೂ ಕಣ್ಣಮುಂದೆ ಜಮುನಾಲಾಲರ ಚಿತ್ರ ಕಟ್ಟಿ ನಿಂತಿತ್ತು. ಕಡೆಗೆ ವರ್ಧಾಕ್ಕೆ ಬಂದೆವು. ಮನೆ ಅಂಗಳದಲ್ಲಿ ಕೆಲವು ಜನ ಗುಂಪು ಸೇರಿ ದ್ದರು. ಎಲ್ಲರ ಮುಖದಲ್ಲೂ ವಿಷಾದ ಮೂಡಿತ್ತು. ದೇಹಸ್ಥಿತಿ ಹೇಗಿದೆ? ಎಂದು ನಾನು ಕೇಳಿದೆ. ಅದಕ್ಕೆ ಉತ್ತರ ಬರಲಿಲ್ಲ. ಜನರ ಮೌನ ದಲ್ಲಿಯೂ ನನಗೆ ಯಾವ ಸೂಚನೆಯೂ ತಿಳಿಯಲಿಲ್ಲ. ಇಷ್ಟರಲ್ಲೆ ಒಂದು ಪಕ್ಕದ ಮಹಡಿಮೆಟ್ಟಲಿಂದ ಡಾಕ್ಟರು ಓಡುತ್ತ ಇಳಿದುಬರುತ್ತಿದ್ದರು.

"ಬಾಪು, ಜಮುನಾಲಾಲರು ಕೈ ಬಿಟ್ಟುಹೋದರು"—ಇಷ್ಟೇ ಅವರು ಹೇಳಿದ್ದು. ಅತ್ಯಂತ ಕಠೋರ ಶಬ್ದ ಇವು. ಆದರೂ, ಅದೇಕೋ ಈ ಅಶುಭ ವಾರ್ತೆಯನ್ನು ನಂಬಲು ಮನ ಒಪ್ಪಲಿಲ್ಲ; ನಮ್ಮ ಪಾಲಿಗೆ ಗಳಿಗೆಗಳಿಗೆಯಲ್ಲೂ ಬಾಳಿ ಬದುಕಿದ್ದ ಅವರು ಏಕಾಏಕಿ ಕಣ್ಣುಮರೆ ಆದಾರೇ? ಹುಟ್ಟಿದವರು ಸತ್ತೇ ಸಾಯುತ್ತಾರೆಂದು ನಮಗೂ ಗೊತ್ತಿದೆ. ನಮ್ಮ ಸ್ವಜನರ ಸಾವು ಅಥವಾ ನಮ್ಮ ಸ್ವಂತ ಸಾವಿನ ಮಾತು ನಮಗೆ ಬಹಳ ವ್ಯಥೆಯನ್ನುಂಟುಮಾಡುತ್ತದೆ. ಆಫ್ರಿಕಾದಲ್ಲಿ ಒಂದು ಬಗೆಯ ಪಕ್ಷಿ ಇದೆ. ಅದರ ಹೆಸರು ಉಷ್ಟ್ರಪಕ್ಷಿ. ಏನಾದರೂ ಅಪಾಯ ಕಂಡುಬಂದ ಕೂಡಲೆ ಆ ಪಕ್ಷಿ ತನ್ನ ತಲೆಯನ್ನು ಮರಳಲ್ಲಿ ಮರೆಸಿ ಏನೂ ಅಪಾಯವೇ ಇಲ್ಲವೆಂದು ಭಾವಿಸಿಕೊಳ್ಳುತ್ತದೆ. ನಾವೂ ಅದೇ ರೀತಿ; ಕಣ್ಣು ತೆರೆದಿದ್ದರೂ ನೋಡಬಯಸುವುದಿಲ್ಲ. ನಾನೂ ಹಾಗೆಯೇ ಮಾಡಿದೆ. ಆದರೆ ಜಮುನಾ ಲಾಲರು ಮಾತ್ರ ಇನ್ನು ಈ ಜಗತ್ತಿನಲ್ಲಿ ಇಲ್ಲ. ಅಪ್ರಿಯವಾದರೂ ಇದು ಸತ್ಯವೇ ಆಗಿತ್ತು. ಅವರ ಹೃದಯಕ್ರಿಯೆ ನಿಂತುಹೋಗಿತ್ತು.

ನಾವು ಜಮುನಾಲಾಲರ ಕೋಣೆಗೆ ಹೋದೆವು. ನೋಡಿದರೆ ಜಮುನಾಲಾಲರು ಸುಪ್ಪತ್ತಿಗೆಯ ಮೇಲೆ ಮಲಗಿದ್ದರು. ೫೨ ವರ್ಷ ದಿಂದ ತನಗೆ ಆಸರೆ ಕೊಟ್ಟಿದ್ದ ಚಿರಸ್ನೇಹಿತ ಶರೀರವನ್ನು ಬಿಟ್ಟು ಪ್ರಾಣ ಒಂದೆರಡು ನಿಮಿಷದ ಹಿಂದೆ ಹಾರಿಹೋಗಿತ್ತು. ಜಮುನಾಲಾಲರು ಮಾತ್ರ ಶಾಂತ ನಿದ್ರೆಯಲ್ಲಿ ಇದ್ದಂತೆ ಕಾಣುತ್ತಿತ್ತು. ಮುಖದಲ್ಲಿ ದುಃಖ ವಾಗಲಿ, ವಿಷಾದವಾಗಲಿ ಇರಲಿಲ್ಲ. ಉದ್ವೇಗದ ಚಿನ್ಹೆ ಇರಲಿಲ್ಲ. ಶರೀರದಲ್ಲಿ ವಿಕಾರವೂ ಕಾಣಲಿಲ್ಲ. ದಿಂಬಿನ ಮೇಲೆ ತಲೆ ಇಟ್ಟು, ಶವವಸ್ತ್ರ ಉಟ್ಟು, ಕಾಲು ನೀಡಿ ಜಮುನಾಲಾಲರು ಗಾಢನಿದ್ರೆಯಲ್ಲಿ ಮಲಗಿದ್ದರು. ಜಮುನಾಲಾಲರ ಹಲ್ಲೆಲ್ಲಾ ಬಿದ್ದುಹೋಗಿತ್ತು. ಊಟ ಮಾಡುವಾಗ, ಹೊರಗೆ ಹೊರಟಾಗ ಕಟ್ಟಿಸಿದ ಹಲ್ಲನ್ನು ಇಟ್ಟುಕೊಳ್ಳು ತ್ತಿದ್ದರು. ಹಲ್ಲು ಇಲ್ಲದೆ ಅವರ ಕೆನ್ನೆ ಹತ್ತಿಹೋದಂತಿತ್ತು. ಮುಖ ದಲ್ಲಿ ಗಾಂಭೀರ್ಯ ತುಂಬಿತ್ತು.

ಜಮುನಾಲಾಲರನ್ನು ಬೊಂಬಾಯಿ ಪಂಚಾಯಿತಿಯಲ್ಲಿ ನೋಡಿದ ಪ್ರಥಮ ದೃಶ್ಯದ ನೆನಪಾಯಿತು. ಆಗಿನ ರೂಪೇ ಒಂದು ವಿಧ. ಆಗ

ಅವರಿಗೆ ಯೌವನ. ಮುಖದಲ್ಲಿ ಹೊಳಪಿತ್ತು. ಈಗಿನ ಜಮುನಾಲಾಲರ ರೂಪೇ ಬೇರೆ ವಿಧ.

ಎರಡಕ್ಕೂ ಎಷ್ಟು ಅಂತರ!

ಮೊದಲ ದೃಶ್ಯ ಮೂವತ್ತು ವರ್ಷದ ಹಿಂದಿನದು. ಈ ದೀರ್ಘಾವಧಿಯಲ್ಲಿ ಎಷ್ಟು ಘಟನೆ ನಡೆದುಹೋದವೋ? ಎಷ್ಟು ಏರಿಳಿತವನ್ನು ಜಮುನಾಲಾಲರು ನೋಡಿದರೋ? ಆದರೆ, ಅವರ ಜೀವನ ರಥ ಮಾತ್ರ ಒಂದೇ ಸಮನೆ ನಡೆದು ಬಂತು. ಸನ್ಮಾರ್ಗದ ಹೆದ್ದಾರಿಯಲ್ಲಿ ವೇಗವಾಗಿ ಸಾಗಿತ್ತು. ಎಲ್ಲ ರಥವೂ ಹುಲ್ಲು ನೀರಿಗಾಗಿ ನಡುನಡುವೆ ನಿಲ್ಲುತ್ತದೆ. ಆದರೆ ಜಮುನಾಲಾಲರು ಓಡೋಡುತ್ತಲೇ ಊಟಮಾಡಿದರು, ನೀರು ಕುಡಿದರು. ಹೀಗೆ ಅವಿಶ್ರಾಂತ ವೇಗದಿಂದ ಓಡುತ್ತಿದ್ದ ರಥದ ಕೀಲು ಒಂದೆಡೆ ಸವೆಯಿತು, ಇನ್ನೊಂದೆಡೆ ಸಡಲಿತು. ಆದರೆ ಜಮುನಾಲಾಲರಿಗೆ ತಮ್ಮ ಗುರಿ ಮುಟ್ಟಬೇಕಾಗಿತ್ತು. ನಿಂತು, ಮುರಿದುದನ್ನು ಸರಿಮಾಡಲು ಸಮಯವಿರಲಿಲ್ಲ. ಇಳಿವಯಸ್ಸಿನಿಂದ ಮೈ ಬಡವಾಗಿತ್ತು. ಆದರೆ ಜೀವನ ರಥ ಎಡಬಿಡದೆ ಮುಂದೆ ಸಾಗಿಯೇ ಇತ್ತು.

"ವೃದ್ಧತ್ವಂ ಜರಸಾ ಬಿನಾ" ೫೨ಕ್ಕೆ ಜಮುನಾಲಾಲರಿಗೆ ಮುದಿತನ ಬರಬೇಕೇ? ಹೀಗೇಕೆ? ಇಷ್ಟೇ: ಅವರ ರಥದ ವೇಗ ಬಹಳ ಹೆಚ್ಚಾಗಿ ಹೋಗಿತ್ತು. ಇದ್ದ ೫೨ ವರ್ಷದಲ್ಲಿ ಅದಕ್ಕಿಂತ ಹತ್ತಾರು ವರ್ಷ ಹೆಚ್ಚಿನ ಬಾಳನ್ನು ಅವರು ಬಾಳಿದ್ದರು. ನಿದಾನವಾಗಿ ಗುರಿಮುಟ್ಟುವ ತಾಳ್ಮೆ ಅವರಿಗಿರಲಿಲ್ಲ. ಅಂತೇ ಆ ವೇಗಕ್ಕೆ ತೇರು ಸವೆಯುತ್ತ, ಮುರಿಯುತ್ತ ಹೋಯಿತು. ಆದರೂ ಜಮುನಾಲಾಲರು ಒಂದುಸಲವಾದರೂ ಹಿಂದಿರುಗಿ ನೋಡಲಿಲ್ಲ. ಜೀವನರಥ ಸವೆದಿದೆಯೇ ಸರಿಯಾಗಿದೆಯೇ ಎಂಬ ಚಿಂತೆಯಾಗಲಿ, ವಿಷಾದವಾಗಲಿ ಅವರಿಗಿರಲಿಲ್ಲ. ಗುರಿ ಮುಟ್ಟಬೇಕು—ಬೇಗ ಮುಟ್ಟಬೇಕು: ಇದೊಂದೇ ಅವರ ಯೋಚನೆ. ಹೀಗಾಗಿ ದೇಹದ ಕಡೆ ಸ್ವಲ್ಪವೂ ಗಮನಕೊಡದೆ ಅವರ ಆತ್ಮಗರುಡ ಮುಂದೆ ಮುಂದೆ ಹಾರಿಹೋಗುತ್ತಿತ್ತು.

ಬಡಪಾಯಿ ಶರೀರ ಆತ್ಮದೊಡನೆ ಎಲ್ಲಿಯತನಕ ಓಡೀತು. ಕಡೆಗೊಮ್ಮೆ ಇನ್ನು ಓಡಲಾರೆ ಎಂದು ಮುರಾಡ ಹಾಕಿತು. ಆಗ

ಶರೀರವನ್ನು ಕೈಬಿಟ್ಟು ಆತ್ಮ ಒಂಟಿಯಾಗಿಯೇ ಓಡತೊಡಗಿತು. ಕುದುರೆ ಜೂಜಿನಲ್ಲಿ ಸವಾರ ಒಂದು ಕುದುರೆ ದಣಿದರೆ ಇನ್ನೊಂದನ್ನು ಹತ್ತಿ ಮುಂಬರಿದಾನು. ಜಮುನಾಲಾಲರೂ ಕೂಡ ಹೀಗೆಯೇ. ಶರೀರ ದಣಿದಕೂಡಲೇ ಅವರ ಆತ್ಮ ದಣಿದ ಶರೀರವನ್ನು ಬಿಟ್ಟಿತು. ಆದರೆ ಆತ್ಮದ ಓಟ ಮುಗಿದಿಲ್ಲ. ತನ್ನ ಗುರಿಯನ್ನು ಅದು ಮುಟ್ಟಲೇಬೇಕು. ಆದ್ದರಿಂದ ಬೇರೊಂದು ಕುದುರೆ—ಶರೀರ—ಯನ್ನು ಏಕೆ ಆಶ್ರಯಿಸ ಬಾರದು ?

ಅಂತು ಆತ್ಮವೇನೊ ಶರೀರ ಬಿಟ್ಟು ಹಾರಿಹೋಯಿತು. ಅದರ ಓಟ ನಿಂತಿಲ್ಲ. ಗುರಿ ಮುಟ್ಟುವವರೆಗೆ ಜಮುನಾಲಾಲರ ಆತ್ಮಕ್ಕೆ ಬಿಡುವಿಲ್ಲ, ವಿಶ್ರಾಂತಿ ಇಲ್ಲ. ಜಮುನಾಲಾಲರ ಜೀವನಕ್ಕೆ ಇದೇ ಸೂತ್ರ.

ಒಳಗೆ ಬಂದವರೇ ಗಾಂಧೀಜೀ ಜಮುನಾಲಾಲರ ತಲೆಯಮೇಲೆ ಕೈ ಇಟ್ಟರು. ಜಮುನಾಲಾಲರ ಧರ್ಮಪತ್ನಿ—ಜಾನಕೀದೇವಿ—ದಿಕ್ಕು ಗೆಟ್ಟಿದ್ದರು. ಗಾಂಧೀಜಿಯನ್ನು ನೋಡುತ್ತಲೇ ಆಶಾತರಂಗ ಉಕ್ಕೇರಿ ಆಕೆ ಆ ಅಲೆಗಳಲ್ಲಿ "ಈಜಾಡಿದಳು."

"ಬಾಪುಜೀ, ಓ ಬಾಪುಜೀ, ನೀವು ಹತ್ತಿರ ಇದ್ದಿದ್ದರೆ ಅವರು ಸಾಯುತ್ತಿರಲಿಲ್ಲ. ಅವರ ದೇಹಸ್ಥಿತಿ ಕೆಟ್ಟಕೂಡಲೆ ನಿಮಗೆ ನಾನು ಸುದ್ದಿ ಕಳುಹಿಸಬಾರದಾಗಿತ್ತೆ ? ಈಗಂತು ನೀವು ಹೇಗಾದರೂ ಅವರನ್ನು ಬದುಕಿಸಿಕೊಡಿ. ಏಕೆ ? ಅವರನ್ನು ಬದುಕಿಸಲಾರಿರಾ ನೀವು ?"

ಗಾಂಧೀಜೀ ಹೇಳಿದರು : "ಜಾನಕಿ, ಈಗ ನೀನು ಅಳಬಾರದು. ನಗಬೇಕು ; ನಕ್ಕು ಮಕ್ಕಳನ್ನು ನಗಿಸಬೇಕು. ಜಮುನಾಲಾಲ ಬದುಕಿಯೇ ಇದಾನೆ. ಯಾರ ಕೀರ್ತಿಗೆ ಅಳಿವಿಲ್ಲವೋ ಅಂಥವನಿಗೆ ಸಾವೆ ? ಅವನ ಬಾಳದಾರಿಯನ್ನು ನೀನು ಬಿಟ್ಟೆಯಾದರೆ, ಆ ದಿಕ್ಕಿನಿಂದ ಮೋರೆ ತಿರುಗಿಸಿದೆಯಾದರೆ ಆಗ ಅವನಿಗೆ ಸಾವು. ಜಮುನಾಲಾಲನ ಬಾಳು ಪರಮಾರ್ಥದ ಬಾಳು. ನಿನ್ನಂಥ ಸಾಧ್ವಿ ಅವನ ಕೈ ಹಿಡಿದಮೇಲೆ ಅಳು ಉಂಟೇ. ಆತ ಹೊತ್ತಿದ್ದ ಕೆಲಸದ ಹೊಣೆಯನ್ನು ಇನ್ನುಮುಂದೆ ನೀನು ನಿರ್ವಹಿಸು. ಆ ಧ್ಯೇಯ ಸಾಧನೆಗಾಗಿಯೇ ಸರ್ವ ಸಮರ್ಪಣೆ ಮಾಡು. ಜಮುನಾಲಾಲ ಬದುಕಿದಾನೆಂದೇ ತಿಳಿ. ಸಾವಿತ್ರಿ ತನ್ನ

ತಪೋಬಲದಿಂದ ಸತ್ಯವಾನನನ್ನು ಬದುಕಿಸಿದಳು. ನಿನಗೆ ಈ ಕಥೆ ಗೊತ್ತಿಲ್ಲವೇ? ಆ ಪುನರ್ಜನ್ಮ ಶರೀರದ್ದು ಎಂದು ತಿಳಿದಿದೀಯಾ? ಶರೀರ ನಾಶವಂತವಾದುದು. ಅದಕ್ಕೆ ಪುನರ್ಜನ್ಮವುಂಟೇ? ಸಾವಿತ್ರಿ ತನ್ನ ತಪಸ್ಸಿನಿಂದ ಸತ್ಯವಾನನ ತಪಸ್ಸನ್ನು ಅಮರಗೊಳಿಸಿದಳು. ಇದು ಸಾವಿತ್ರಿ ಕತೆಯ ನಿಜವಾದ ಅಂತರಾರ್ಥ. ನೀನು ನಿನ್ನ ತಪದಿಂದ ನಿನ್ನ ಪತಿಯ ಕೀರ್ತಿಯನ್ನು ಬೆಳಗಿಸು. ಆಗ ಜಮುನಾಲಾಲ ಬದುಕಿದಾನೆಂದೇ ನಾವು ತಿಳಿದೇವು."

"ಬಾಪುಜೀ, ಸರ್ವಸ್ವವನ್ನೂ ಅರ್ಪಿಸಲು ನಾನು ಸಿದ್ಧ. ಆದರೆ ನನ್ನ ಶಕ್ತಿ ಎಷ್ಟು? ನನ್ನ ತಪಸ್ಸಾದರೂ ಏನು? ಅವರು ಹಿಡಿದಿದ್ದ ಕೆಲಸವನ್ನು ನಾನು ಹೇಗೆ ಮುಂದುವರಿಸಲಿ? ಅವರ ತಪಸ್ಸನ್ನು ಹೇಗೆ ಬೆಳಗಿಸಲಿ? ಅವರನ್ನು ಸಾಯಗೊಡಬೇಡಿ. ನೀವು ಅವರನ್ನು ಬದುಕಿಸಲಾರಿರಾ? ಹಾಗಾದರೆ ಅವರು ಸತ್ತೇಹೋದರೇ? ಇನ್ನು ಮಾತನ್ನೇ ಆಡರೇ?"

"ನಿನಗೆ ಇಲ್ಲದ ಧೈರ್ಯ ಕೊಡಲು ನಾನು ಬರಲಿಲ್ಲ. ಜಮುನಾಲಾಲನ ದೇಹ ಮೃತವಾಯಿತು. ನಿಜವಾದ ಜಮುನಾಲಾಲನೇನೋ ಬದುಕಿಯೇ ಇದಾನೆ. ಇನ್ನುಮುಂದೆ ಅವನನ್ನು ಜೀವಂತವಾಗಿಡುವುದು ನಮ್ಮೆಲ್ಲರ ಕೆಲಸ."

ಜಾನಕೀದೇವಿ ಶ್ರದ್ಧೆಯಲ್ಲಿ ಮುಳುಗಿಹೋಗಿದ್ದಳು. ಪದೇಪದೇ "ಅವರನ್ನು ಬದುಕಿಸಿ" ಎಂದು ಬೇಡುತ್ತಲೇ ಇದ್ದಳು. ಸತ್ತವರು ಯಾರೂ ಹಿಂತಿರುಗಲಾರರೆಂದು ಆ ಅಭಾಗಿನಿ ಹೇಗೆ ನಂಬಿಯಾಳು? ಆಕೆಯ ವಿಲಾಪ ಕಿಸಾ ಗೌತಮಿಯ ಕತೆಯನ್ನು ನೆನಪಿಗೆ ತರುತ್ತಿತ್ತು. ಗೌತಮಿಯ ಮಗು ಸತ್ತುಹೋಯಿತು. ಮೋಹವಶಳಾಗಿ ಅವಳು ಮಗುವಿನ ದಹನಕ್ರಿಯೆ ನಡೆಸಲಿಲ್ಲ. ಸತ್ತವರೂ ಮತ್ತೆ ಬದುಕಿ ಬಂದಾರೆಂದು ಅವಳ ಯೋಚನೆ. ಅದಕ್ಕಾಗಿಯೇ ಮಗುವನ್ನು ಬುದ್ಧನ ಬಳಿಗೆ ಒಯ್ದಳು. ಭಗವಾನ್, ಇದನ್ನು ಬದುಕಿಸಿ ಎಂದು ಬೇಡಿದಳು. ಬುದ್ಧ ಭಗವಾನ್ ಹೇಳಿದ: "ದೇವಿ, ಈ ಮಗುವನ್ನು ಅಗತ್ಯವಾಗಿ ಬದುಕಿಸುತ್ತೇನೆ. ಒಂದೆರಡು ಸಾಸುವೆಕಾಳು ತಂದುಕೊಡು. ಯಾರೂ

ಸತ್ತಿಲ್ಲದ ಮನೆಯಿಂದ ಆ ಸಾಸುವೆ ತರಬೇಕು, ಕಂಡೆಯಾ ? ” ಗೌತಮಿ ಮನೆಮನೆ ತಿರುಗಿದಳು. ಮೊದಲು ಸಾಸುವೆ ಬೇಡಿದಳು; ಅನಂತರ ನಿಮ್ಮ ಮನೆಯಲ್ಲಿ ಎಂದಾದರೂ, ಯಾರಾದರೂ ಸತ್ತಿದಾರೆಯೇ ಎಂದು ಕೇಳಿದಳು. ಅದಕ್ಕೆ ದೊರೆಯಬೇಕಾದ ಉತ್ತರವೇ ದೊರೆಯುತ್ತಿತ್ತು. ಅಲೆದಲೆದು ಆಯಾಸಗೊಂಡು ಬುದ್ಧನ ಬಳಿ ಸಾರಿ “ ಭಗವಾನ್, ಎಷ್ಟೋ ಮನೆ ತಿರುಗಿದೆ; ಸಾವುಗಾಣದಮನೆ ಒಂದೂ ಇಲ್ಲ” ಎಂದಳು. ಆಗ ಬುದ್ಧ ಭಗವಾನನು ಉಪದೇಶ ಕೊಟ್ಟ. ಆವಳ ಮೋಹ ದೂರ ವಾಯಿತು. ಗಾಂಧೀಜೀ ಹೀಗೆ ಉಪದೇಶ ಮಾಡಿದಮೇಲೆ ಜಾನಕೀ ದೇವಿಯ ಆಸೆ ಮುರಿದುಬಿತ್ತು. ಬಾಣದೇಟು ತಿಂದ ಜಿಂಕೆಯಂತೆ ಆಕೆ ಒದ್ದಾಡಲಾರಂಭಿಸಿದಳು.

“ ಅವರನ್ನು ಬದುಕಿಸಲಾರದೆಹೋದರೆ ಭಗವಂತನ ದರ್ಶನ ವನ್ನಾದರೂ ಮಾಡಿಸಬಾರದೇ. ಬಾಪೂ, ಯಾವುದಾದರೂ ಭಜನೆ ಮಾಡಿ. ವಿನೋಬಾರಿಂದ ಗೀತಾ ಪಾರಾಯಣ ಮಾಡಿಸಿ. ನಾವೆಲ್ಲರೂ ಭಜನೆ ಮಾಡೋಣವೇ ? ಆಗಲಿ ಓಂ, ಓಂ, ಓಂಕಾರ ಹೇಳಿ. ಯಾರೂ ಅಳಬೇಡಿ. ಎಲ್ಲರೂ ರಾಮ-ರಾಮ ಎನ್ನಿ.”

ಗಾಂಧೀಜೀ ಹೇಳಿದರು: “ ಜಾನಕೀ, ಜಮುನಾಲಾಲನಿಗೆ ಭಗವದ್ದರ್ಶನವಾಯಿತು. ಇನ್ನು ನಿನಗೆ ಭಗವದ್ದರ್ಶನವಾಗಬೇಕು. ನೀನದಕ್ಕೆ ಸಿದ್ಧಳಾಗು. ಆತ ಮಾಡಿದ ಕೆಲಸವನ್ನು ನೀನು ಮುಗಿಸು, ಪೂರ್ತಿಮಾಡು.”

“ ಹಾಗಾದರೆ ಬಾಪೂ, ನನ್ನನ್ನು ಸಹಗಮನಮಾಡಗೊಡಿ. ಈಗಿನ ಕಾಲದಲ್ಲಿ ಯಾರೂ ಸಹಗಮನ ಮಾಡಕೂಡದೇನು ? ಮಾಡಲಾರರೇನು? ನನ್ನ ಮಾತನ್ನು ನಂಬಿ ಬಾಪೂ. ನನ್ನನ್ನು ಬೆಂಕಿ ಸುಡಲಾರದು, ನನಗದರಿಂದ ನೋವಾಗದು. ಆನಂದವಾಗಿ ನಾನು ಆ ಬೆಂಕಿಯಲ್ಲಿ ಬೂದಿಯಾಗುತ್ತೇನೆ. ನನಗೆ ಸಹಗಮನ ಮಾಡಿಸಿ.”

“ ಜಾನಕೀ, ಬೆಂಕಿಗೆ ಬೀಳುವುದರಲ್ಲಿ ಬಂಟತನವೇನು ಬಂತು ? ಸಾವಿರಾರು ಜನ ಹೆಂಗಸರು ತಮ್ಮತಮ್ಮ ಗಂಡಂದಿರೊಡನೆ ಸತಿ ಹೋಗಿದಾರೆ, ನಾ ಬಲ್ಲೆ. ಅದರಲ್ಲೂ ಒಂದು ಬಗೆಯ ಧೀರತನ ಇದೆ ;

ನಿಜ. ಆದರೆ ಅದು ನಿಜವಾದ ಧೀರತನವಲ್ಲ. ನಿಜವಾದ ಸಹಗಮನ ತೀರ ಬೇರೆಯಾದುದು. ಅದೇ ಸರ್ವಶ್ರೇಷ್ಠ ಯಜ್ಞ. ಸಾಧ್ವಿಯಾದವಳು ತನ್ನ ಮೈಯನ್ನು ಬೆಂಕಿಯಲ್ಲಿ ಬೇಯಿಸಬೇಕೆ? ಆ ಕೆಲಸ ತುಚ್ಛವಾದುದು; ಬರೀ ಬೂದಿ. ದುರ್ಗುಣವನ್ನೆಲ್ಲ ಸುಟ್ಟುಹಾಕುವುದೇ ನಿಜವಾದ ಸತೀತ್ವ. ದೈವನಿರ್ಮಿತವಾದ ಈ ವಿಶ್ವದಲ್ಲಿ ಜಡ ಚೇತನ, ಗುಣ ದೋಷ ತುಂಬಿವೆ. ಸಾಧು ಹಂಸ ಗುಣದ ಹಾಲು ಕುಡಿದು ದೋಷದ ನೀರನ್ನು ಬಿಟ್ಟುಬಿಡುತ್ತದೆ.

ನಿನ್ನ ಸರ್ವ ದುರ್ಗುಣವನ್ನೂ ಜಮುನಾಲಾಲನ ಚಿತೆಯಲ್ಲಿ ಹೋಮಮಾಡು. ಉಳಿದದ್ದೆಲ್ಲಾ ಅಪರಂಜಿ. ಅದನ್ನು ಸುಡುವುದಾದರೂ ಹೇಗೆ? ಕೃಷ್ಣಾರ್ಪಣ ಮಾಡುವುದೊಂದೇ ಉಳಿದಿರುವ ದಾರಿ. ತ್ಯಾಗ ಮೂರ್ತಿಯಾಗುವುದು ಹೆಂಗಸಿಗೆ ಮಾತ್ರವೇ ಸಾಧ್ಯ ಎಂದು ನಾನು ನಂಬಿದೇನೆ. ಏಕೆಂದರೆ, ವಿಧವೆಯರಾದಮೇಲೆ ಹಿಂದೂ ಸ್ತ್ರೀಯರು ಸಮಸ್ತ ಭೋಗಕ್ಕೂ ಎಳ್ಳು ನೀರು ಬಿಟ್ಟು ವಿಕಾರಶಮನಮಾಡಿಕೊಳ್ಳು ತ್ತಾರೆ. ಈ ತಪಸ್ಸಿನಿಂದ ಅವರಿಗೆ ಹೊಸದೊಂದು ಬಲ ಮೂಡಿಬರುತ್ತದೆ. ನೀನೀಗ ತ್ಯಾಗದ ಪುತ್ಥಳಿಯಾದೆ. ನಿನ್ನ ದೋಷಗಳನ್ನು ಜಮುನಾ ಲಾಲನ ಹವನಕುಂಡದಲ್ಲಿ ಹೋಮಮಾಡು. ಹಾಗೆ ಮಾಡಿ ಉಳಿ ಯುವ ಅಪರಂಜಿಯನ್ನು ಶ್ರೀಕೃಷ್ಣನಿಗೆ ಒಪ್ಪಿಸು. ಇದೇ ಸಹಗಮನ. ಏಳು, ಎದ್ದೇಳು, ಸತಿಯಾಗು, ಸಹಗಮನಮಾಡು, ತಂಗೀ".

"ಬಾಪೂ, ನಿಮ್ಮಪ್ಪಣೆ. ಹೊನ್ನನ್ನು ಮಣ್ಣಿಂದೇ ನಾ ತಿಳಿದಿದೇನೆ. ನನಗೆ ಏನುಬೇಕು? ಹೊಟ್ಟೆಪಾಡಿಗೆ ನನ್ನ ಮಕ್ಕಳು ನನಗೆ ಕೊಟ್ಟಾರು. ತಾವಿದೀರಿ. ದೇವರಿದಾನೆ. ಇಡೀ ಜಗತ್ತೇ ಇದೆ. ಯಾರು ನನ್ನನ್ನು ಹೊಟ್ಟೆಗಿಲ್ಲದೆ ಹಸಿವಿನಿಂದ ಸಾಯಗೊಟ್ಟಾರು? ಅಂತೇ ನನ್ನ ಸಕಲ ಸಂಪತ್ತೂ, ನಾನೂ ಎಲ್ಲರೂ ಕೃಷ್ಣಾರ್ಪಣ."

ಜಾನಕೀದೇವಿ ಇಷ್ಟು ಹೇಳಿ ಸ್ವಸ್ಥಳಾದಳು.

ಜಮುನಾಲಾಲರ ಕಳೇಬರ ಬರಬರುತ್ತಾ ಬಾಡತೊಡಗಿತು. ಕಾಲು ನೀಲಿಗಿಟ್ಟಿತು. ಆಗ ಅರ್ಥವಾಯಿತು. ಹಿಂದೆ ಉಳಿದಿದ್ದ ಮೈ ಕೂಡಾ ನಮ್ಮನ್ನು ಬಿಟ್ಟುಹೋಗುತ್ತಿದೆ.

ಕೆಲವೇ ದಿನದ ಹಿಂದೆ ನಡೆದ ದೃಶ್ಯವಿದು. ಅಂತೆಯೇ ಎಲ್ಲವೂ ಸ್ಪಷ್ಟವಾಗಿ ಕಣ್ಣೆದಿರು ಕಟ್ಟಿದಂತಿದೆ.

* * * * *

ಜಮನಾಲಾಲರ ಮೃತ್ಯುವು, ಸಾವುಗಳಿಗೆ ರಕ್ತದ ಒತ್ತಡದಿಂದ ತಲೆಯೊಳಗಿನ ನಾಡಿ ಒಡೆದುದೇ ಕಾರಣವೆಂದು ತಿಳಿದುಬಂತು. ನಾನು ಯೋಚಿಸಿದೆ: ಯೋಗಕ್ರಿಯೆಯಿಂದ ತಲೆಯೊಳಗಿನ ನಾಡಿಯನ್ನು ಒಡೆಯುವುದೇ ಬ್ರಹ್ಮರಂಧ್ರಭೇದನ ಇದ್ದೀತೆ? ಇಚ್ಛಾಮಾತ್ರದಿಂದ ಕಪಾಲದ ನಾಡಿಯೊಂದನ್ನು ಭೇದಿಸಿ ಪ್ರಾಣಬಿಡುವ ಉಪಾಯ ಒಂದು ನಮ್ಮ ಪ್ರಾಚೀನ ಋಷಿಗಳಿಗೆ ತಿಳಿದಿದ್ದಿರಬೇಕು. ಅದನ್ನೇ ಅವರು ಕಪಾಲಕ್ರಿಯೆ ಎಂದು ಕರೆಯುತ್ತಿದ್ದರೋ ಏನೋ? ಅದೇನೇ ಇರಲಿ, ಜಮನಾಲಾಲರದು ಸುಖಮರಣ. ಹದಿನೈದು ನಿಮಿಷಗಳೊಳಗಾಗೇ ಕತೆಯೆಲ್ಲ ಮುಗಿದುಹೋಯಿತು.

"ನನಗೆ ಸುಖದ ಸಾವು ಬರಲಿ ಎಂದು ನನಗಾಗಿ ದೇವರನ್ನು ಪ್ರಾರ್ಥಿಸು" ಎಂದು ಆಗಾಗ ನನಗೆ ಜಮನಾಲಾಲರು ಬರೆಯುತ್ತಿದ್ದರು. ಅವರು ಬೇಡಿದುದನ್ನೇ ದೇವರು ಅವರಿಗೆ ಕೊಟ್ಟ.

ಜಮನಾಲಾಲರ ಈ ಕೊನೆಯ ಚಿತ್ರ ಎಲ್ಲರ ಹೃದಯವನ್ನೂ ಕರಗಿಸುವಂಥದು. ನೀರಾಗಿಸುವಂಥದು. ಆದರೆ ಅವರ ನಿಜಚಿತ್ರ, ಅವರ ಕರ್ಮಸಮುಚ್ಚಯ. ಅದೊಂದು ನಂದಾದೀಪ. ಮುಂದಿನ ಕಾಲಕ್ಕೆ ಪೂಜಾಮಾರ್ಗದಲ್ಲಿ ದಾರಿತೋರುವ ಬೆಳಕು. ಆ ಚಿತ್ರ ಮನನಯೋಗ್ಯ ಚಿತ್ರ.

# ೨

ಜಮುನಾಲಾಲರು ೧೮೮೯ ನವಂಬರ್ ನಾಲ್ಕರಲ್ಲಿ ಹುಟ್ಟಿದರು. ಫೆಬ್ರವರಿ ೧೧, ೧೯೪೨ ರಲ್ಲಿ ಅವರ ದೇಹಾಂತವಾಯಿತು. ಒಟ್ಟು ೫೨ ವರುಷ ೩ ತಿಂಗಳು ಏಳು ದಿನ ಶರೀರಯಾತ್ರೆ ಮಾಡಿದರು. ಈ ಅವಧಿಯಲ್ಲಿ ಪ್ರಪಂಚದ ನಾಟ್ಯರಂಗದ ಮೇಲೆ ಜಮುನಾಲಾಲರು ಅನೇಕ ಪಾತ್ರ ಅಭಿನಯಿಸಿದಾರೆ. ಸೇಟ್ ಪಾತ್ರ ಅಭಿನಯಿಸಿದರು; ಮುಖಂಡ ರಾಗಿ ನಾಟ್ಯರಂಗವನ್ನು ಅಲಂಕರಿಸಿದರು. ಅರಮನೆಯಲ್ಲಿ ವಾಸಿಸಿದರು. ಜೈಲಿನಲ್ಲಿ ನರಳಿದರು. ಮಗನಂತೆ ನಲಿದರು, ತಂದೆಯಂತೆ ಸಂಸಾರ ನಡೆಯಿಸಿದರು. ಜಮುನಾಲಾಲರ ಪ್ರತಿಯೊಂದು ಅಭಿನಯದಲ್ಲೂ ಒಂದು ಅಸಾಧಾರಣ ಲಕ್ಷಣ ಎದ್ದು ಕಾಣುತ್ತದೆ.

ಅವರಲ್ಲಿದ್ದ ಎಲ್ಲಕ್ಕಿಂತ ಅತಿ ದೊಡ್ಡ ಗುಣ, ಹಣದ ಬಗ್ಗೆ ಅವರಿಗಿದ್ದ ತಿರಸ್ಕಾರ. ಹಣವನ್ನು ಕಂಡರೆ ಜಮುನಾಲಾಲರಿಗೆ ಬಹು ಉದಾಸೀನ. ಆದರೆ ದುಂದುಗಾರರಲ್ಲ. ವಿಲಾಸಪ್ರಿಯತೆ ಅವರಲ್ಲಿರಲಿಲ್ಲ. ವ್ಯರ್ಥ ವೆಚ್ಚ ಅವರರಿಯರು. ತಮ್ಮ ದೇಹಪೋಷಣೆಯ ವೆಚ್ಚದಲ್ಲಿ ಅತ್ಯಂತ ಕೃಪಣರು. ಅವರ ಊಟ, ಉಡಿಗೆ ಬಹು ಸರಳ, ಅತಿ ಸುಲಭ. ಅಡಿಗೆ ಮನೆಯಲ್ಲಿ ರುಚಿರುಚಿ ಪದಾರ್ಥಗಳು ಇಲ್ಲವೇ ಇಲ್ಲ. ಧರ್ಮಶಾಲೆಯ ಒಂದು ಕೋಣೆಯಲ್ಲಿ ವಾಸ. ಕಡೇದರ್ಜೆ ರೈಲುಗಾಡಿ ಪ್ರಯಾಣ. ಅವರ ಮೋಟಾರ್ ಅವರದಲ್ಲವೇ ಅಲ್ಲ. ಯಾರು ಹತ್ತಿದರೆ ಅವರದೇ. ಒಂದು ಮುರುಕಲು ಎತ್ತಿನ ಗಾಡಿಗಿಂತ ಕಡೆ. ಅವರ ಬಟ್ಟೆಯೋ ತುಂಬಾ ತೇಪೆ. ಇದು ಅವರ ಕೃಪಣತೆಯ ಲಕ್ಷಣ.

ಸರಳತೆ ಅವರಿಗೆ ಬಹು ಇಷ್ಟ. ಈ ವಿಷಯ ಮಾತಾಡುತ್ತಿದ್ದರೆ ಅವರು ಮೈಮರೆಯುತ್ತಿದ್ದರು. ಅವರು ಮಿತವ್ಯಯಿ ಮಾತ್ರವಲ್ಲ, ತಮ್ಮ ಸ್ನೇಹಿತರಿಗೆ ಈ ಮಿತವ್ಯಯ ಕಲಿಸುವುದರಲ್ಲಿ ಸ್ವಲ್ಪವೂ ಹಿಂಜರಿಯುತ್ತಿರಲಿಲ್ಲ. ಸ್ನೇಹಿತರು ಬೇಕಾದಷ್ಟು ಹಾಸ್ಯಮಾಡಲಿ, ತಮ್ಮ ಊಟ ತಿಂಡಿಯನ್ನು ಅಲ್ಲಗಳೆಯಲಿ, ಅವರು ಮಾತ್ರ ಸ್ವಲ್ಪವೂ ಅಲುಗಾಡುತ್ತಿರಲಿಲ್ಲ.

ತಮ್ಮ ಶರೀರ ರಕ್ಷಣೆಗೆ ಅವಶ್ಯಕವಾದುದಕ್ಕಿಂತ ಹೆಚ್ಚು ವೆಚ್ಚ ಮಾಡಲು ಯಾರಿಗೆ ತಾನೆ ಏನಧಿಕಾರ? ಈ ಮಾತು ಅವರಿಗೆ ರಕ್ತಗತವಾಗಿತ್ತು. ಹನ್ನೊಂದನೇ ಇಂದ್ರಿಯವಾಗಿತ್ತು. ಶರೀರಸುಖ, ವಿಶ್ರಾಂತಿಯ ವಿಷಯದಲ್ಲಿ ಈ ಮೇಲುಬಗೆಯ ಕೃಪಣತೆ; ಹಣದಲ್ಲಿ ಅವರಿಗಿದ್ದ ನಿರ್ಮೋಹ, ಅದ್ಭುತ ಔದಾರ್ಯ; ಈ ಎರಡು ವಿಷಮ ಗುಣಗಳ ಅಸಾಧಾರಣ ಮಿಲನವೇ ಅವರ ಜೀವನ. ಈ ಸಮನ್ವಯದ ಭಾಷ್ಯ ಮಾಡುವುದು ಬಹು ಸುಲಭ. ಈಶ್ವರದತ್ತ ಧನಕ್ಕೆ ನಾವು ಕೇವಲ ಸಂರಕ್ಷಕರು ಎಂದು ಜಮುನಾಲಾಲರು ನಂಬಿದ್ದರು. ಈ ನಂಬಿಕೆಯೇ ಅವರ ಶರೀರ ಕೃಪಣತೆಗೆ ಕಾರಣ. ಹಣವನ್ನು "ಸ್ವಂತ" ಭೋಗಕ್ಕಲ್ಲ, "ಪರ"ರ ಉದ್ಧಾರಕ್ಕಾಗಿ ನಾವು ವೆಚ್ಚಮಾಡಬೇಕು. ಅನ್ಯ ಸಾಧನ ಗಳಂತೆ ಹಣವೂ ಪರೋಪಕಾರಕ್ಕೆ ಒಂದು ಸಾಧನ ಮಾತ್ರ ಎಂಬುದು ಜಮುನಾಲಾಲರ ನಂಬಿಕೆ. ಈ ನಂಬಿಕೆಯೇ ಅವರಿಗೆ ಹಣದ ಬಗ್ಗೆ ಇದ್ದ ತಾತ್ಸಾರಕ್ಕೆ ಕಾರಣ. ಹಣವಿಲ್ಲದೆ ಸುಲಭವಾಗಿ ವ್ಯವಹಾರ ನಡೆಸ ಬಹುದು. ದೈವೀಸಂಪತ್ತು, ಪರೋಪಕಾರ ವೃತ್ತಿ ಇರುವೆಡೆ ಹಣವಿದ್ದ ರೆಷ್ಟು, ಇಲ್ಲದಿದ್ದರೆಷ್ಟು? ದೈವೀಸಂಪತ್ತು ಪ್ರಧಾನ ಸಾಧನ. ಹಣ ಗೌಣ. ಅವರ ಈ ಭಾವನೆ ಆತ್ಮವಿಶ್ವಾಸದ ಕುರುಹು. ಅವರಿಗೆ ದೇವರಲ್ಲಿದ್ದ ಅಗಾಧ ವಿಶ್ವಾಸದ ಚಿಹ್ನೆ. ಧರ್ಮರಾಜನ ಈ ಹೇಳಿಕೆಯ ಮರ್ಮ ಅವರು ಚೆನ್ನಾಗಿ ಅರಿತಿದ್ದರು.

" ಯಜ್ಞಾಯಸೃಷ್ಟಾನಿ ಧನಾನಿ ಧಾತ್ರಾ |
ಯಜ್ಞಾಯ ಸೃಷ್ಟಃ ಪುರುಷೋ ರಕ್ಷಿತಾ ಚ |
ತಸ್ಮಾತ್ಸರ್ವಂ ಯಜ್ಞ ಏವೋಪಯೋಜ್ಯಂ
ಧನಂ ನ ಕಾಮಾಯ ಹಿತಂ ಪ್ರಶಸ್ತಮ್ ||

ಯಜ್ಞಾರ್ಥ ಅಂದರೆ ಪರೋಪಕಾರಕ್ಕಾಗಿ ಬ್ರಹ್ಮನು ಹಣವನ್ನು. ನಿರ್ಮಿಸಿದ. ಮನುಷ್ಯನನ್ನು ನಿಧಿಗೆ ಪಾಲಕನನ್ನಾಗಿ ಮಾಡಿದ. ಆದುದ ರಿಂದ ಮನುಷ್ಯ ತನ್ನ ಹಣವನ್ನೆಲ್ಲಾ ಪರೋಪಕಾರದಲ್ಲಿ ವೆಚ್ಚಮಾಡ ಬೇಕು. ಐಹಿಕ ಭೋಗ ವಿಲಾಸಕ್ಕಾಗಿ ವೆಚ್ಚಮಾಡಬಾರದು.

ಇಂದು ಗಾಂಧೀಜೀ ಶ್ರೀಮಂತರ ಮುಂದಿಟ್ಟಿರುವ ನಿಧಿಪಾಲಕತ್ವ ಪದ್ಧತಿಯನ್ನು ೫೦೦೦ ವರ್ಷದ ಹಿಂದೆಯೇ ಯುಧಿಷ್ಠಿರ ಚರ್ಚಿಸಿದ್ದ. ಮನುಷ್ಯ ಕೇವಲ ಹಣದ ಸಂರಕ್ಷಕ, ಹಣವಿರುವುದು ಪರೋಪಕಾರಕ್ಕಾಗಿ, ಅಂದಮೇಲೆ ಆ ಹಣವನ್ನು—ಪರರದನ್ನು—ತನ್ನ ಭೋಗ ವಿಲಾಸಕ್ಕೆ ಹೇಗೆತಾನೆ ವೆಚ್ಚಮಾಡಲಾದೀತು? ಅದನ್ನು ಹಾಗೆ ಉಪ ಯೋಗಿಸಿದರೆ ಉಂಡ ಮನೆಗೆ ಎರಡು ಬಗೆದಂತೆ. ಅದು ವಿಶ್ವಾಸಘಾತ ಎಂದು ಧರ್ಮರಾಜ ಹೇಳುತ್ತಾನೆ. ಇಂದು ಗಾಂಧೀ ಹೇಳುತ್ತಿರುವುದು ಇದನ್ನೇ.

ಜಮನಾಲಾಲರು ತಮ್ಮ ವ್ಯವಹಾರದಲ್ಲಿ ಈ ಸೂತ್ರವನ್ನು ಅವ ಲಂಬಿಸಿದ್ದರು. ಅದನ್ನು ಅಕ್ಷರಶಃ ಪಾಲಿಸಿದರು; ಇದರ ಪರಿಣಾಮವಾಗಿ ಶರೀರಸುಖದ ಬಗ್ಗೆ ಜಿಪುಣರಾದರೂ ಜಮನಾಲಾಲರು ಪರೋಪಕಾರ ದಲ್ಲಿ ಸಾಟಿಯಿಲ್ಲದ ಉದಾರ ಸ್ವಭಾವದ ಪುರುಷರಾದರು. ಅವರು ಲಕ್ಷಾಂತರ ರೂಪಾಯಿ ದಾನ ಮಾಡಿದುದು ಎಲ್ಲರಿಗೂ ತಿಳಿದ ವಿಚಾರ. ಆದರೆ ಸ್ನೇಹಿತರ ಕಷ್ಟಕ್ಕಾಗಿ ತಾವೇ ಹೋಮವಾಗಿ ಹೋಗುವ ಅವರ ಮನೋಭಾವ ಅನೇಕರಿಗೆ ತಿಳಿಯದು. ಸ್ನೇಹಿತರಲ್ಲಿ ಯಾರಿಗಾದರೂ ಹಣದ ತೊಂದರೆ ಒದಗಿದರೆ ಅವರು ತಾವಾಗಿಯೇ "ನೋಡಿ, ತೊಂದರೆ ಪಡಬೇಡಿ, ನನಗಿರುವುದೆಲ್ಲ ನಿಮ್ಮದೆ, ಭೇದವೆಣಿಸಬೇಡಿ" ಎನ್ನುತ್ತಿದ್ದರು. ಹೀಗೆ ಹೇಳುವ ಸಾಹಸಿಗಳು ಅತಿ ವಿರಳ.

ಜಮನಾಲಾಲರು ಹಣವನ್ನು ಎಷ್ಟೆಷ್ಟು ಉದಾಸೀನದಿಂದ ನೋಡಲಾರಂಭಿಸಿದರೋ ಅಷ್ಟಷ್ಟೂ ಲಕ್ಷ್ಮಿ ಅವರನ್ನು ಸತ್ಕರಿಸ ಲಾರಂಭಿಸಿದಳು.

ಭಾಗವತದಲ್ಲಿ ಸಮುದ್ರಮಥನದ ಸಂಬಂಧವಾಗಿ ಒಂದು ಚಿತ್ತಾ ಕರ್ಷಕ ಕಥೆ ಇದೆ. ದೇವಾಸುರರು ಅಮೃತಕ್ಕಾಗಿ ಸಮುದ್ರಮಥನ ಮಾಡಿದಾಗ ಮೊಟ್ಟಮೊದಲು ವಿಷ ಹುಟ್ಟಿತು. ಅದರಿಂದ ಇಡೀ ವಿಶ್ವವೇ ತಲ್ಲಣಿಸಿತು. ವಿಶ್ವದ ವ್ಯಾಕುಲ ನೋಡಿ, ಜನರ ಮೊರೆ ಕೇಳಿ, ಈಶ್ವರ ಆ ವಿಷ ಕುಡಿದು ಪ್ರಜೆಗಳನ್ನು ರಕ್ಷಿಸಿದ. ಅನಂತರ ಕಾಮಧೇನು ಹುಟ್ಟಿತು. ಅದಾದ ಮೇಲೆ ಉಚ್ಚೈಃಶ್ರವ ಎಂಬ ಕುದುರೆ, ಐರಾವತ,

ಕೌಸ್ತುಭಮಣಿ, ಕಲ್ಪವೃಕ್ಷ ಒಂದರ ಹಿಂದೊಂದು ಹೊರಬಂದವು. ತರುವಾಯ ಅಪ್ಸರೆಯರು ಹುಟ್ಟಿದರು. ಕಡೆಗೆ ಲಕ್ಷ್ಮಿ.

ಈ ಕತೆ ಸೃಷ್ಟಿರಚನೆಯ ಕ್ರಮಬದ್ಧ ಇತಿಹಾಸ ಅಹುದೋ ಅಲ್ಲವೋ ತಿಳಿಯದು. ಮೊಟ್ಟಮೊದಲು ಭೂಮಿಯಮೇಲೆ ವಿಷ ಗಾಳಿ ಮಾತ್ರ ಇತ್ತೇ? ಪ್ರಾಯಶಃ ವಿಷ ಆದರ ಸಂಕೇತವೇ ಇರ ಬಹುದು. ಅನಂತರ ಹಸು, ಕುದುರೆ, ಆನೆಗಳ ಸೃಷ್ಟಿಯಾಗಿ ಜನ ಅವನ್ನೂ ಭೂಮಿಯನ್ನೂ ಸಂಪೂರ್ಣ ಉಪಯೋಗಪಡಿಸಿಕೊಂಡರು. ಕಾಯಕ ಮಾಡಲಾರಂಭಿಸಿದರು. ಕಾಯಕದಿಂದ ಕಲ್ಪತರು ಮೊಳೆ ಯಲೇಬೇಕು ತಾನೆ? ಪರಿಶ್ರಮದ ಕಲ್ಪತರುವಿನಿಂದ ಬೇಕಾದುದು ದೊರೆಯುವುದು.

ಪರಿಶ್ರಮ ಹೆಚ್ಚಿದಂತೆ ಧನ ವೃದ್ಧಿಯಾಗಲೇಬೇಕು, ಅನಿವಾರ್ಯ. ಆದರೆ ಧನದ ಸಂಕೇತವಾದ ಲಕ್ಷ್ಮಿ ತನ್ನ ವರನ ಆಯ್ಕೆಯಲ್ಲಿ ತೋರಿಸಿದ ವಿವೇಚನೆ ಪ್ರತಿಯೊಬ್ಬ ಧನಾಪೇಕ್ಷಿಗೂ ಒಂದು ಪಾಠವಾಗಿದೆ. ಯಾರನ್ನು ವರಿಸಲಿ ಎಂದು ಲಕ್ಷ್ಮಿ ಯೋಚಿಸಿದಳು. ಸಂಪೂರ್ಣ ನಿರ್ದೋಷಿ ಮತ್ತು ಗುಣವಂತ ವರ ಬೇಕು.

ತಪಸ್ವಿ ದೂರ್ವಾಸ ಕ್ರೋಧಿ, ಯೋಗ್ಯನಲ್ಲ. ಬೃಹಸ್ಪತಿ ಜ್ಞಾನಿ ಯಾದರೂ ಅನಾಸಕ್ತನಲ್ಲ. ಬ್ರಹ್ಮ ಮಹತ್ವಶಾಲಿ, ಆದರೆ ಜಿತೇಂದ್ರಿಯ ನಲ್ಲ. ಇಂದ್ರ ಶ್ರೀಮಂತ, ಆದರೆ ಆ ಶ್ರೀಮಂತಿಕೆ ಪರಾಧೀನ. ಪರಶು ರಾಮ ಧರ್ಮಿಷ್ಟ, ಆದರೆ ಪ್ರೇಮಶೂನ್ಯ. ಶಿಬಿ ತ್ಯಾಗಿ, ಆದರೆ ಇತರ ಸದ್ಗುಣಗಳಿಲ್ಲ. ಕಾರ್ತವೀರ್ಯ ವೀರ, ಆದರೆ ಮೃತ್ಯುಂಜಯನಲ್ಲ. ಸನಕಾದಿಗಳು ಅನಾಸಕ್ತರೇ, ಆದರೆ ಅಕರ್ಮಿಗಳು. ಮಾರ್ಕಂಡೇಯ ಧೀರ್ಘಾಯು, ಆದರೆ ಗುಣಾಢ್ಯನಲ್ಲ. ಹಿರಣ್ಯಕಶಿಪು ಗುಣಾಢ್ಯ, ಆದರೆ ಅವನ ವೇಷಭೂಷಣ ಶುಭವಲ್ಲ. ವಿಷ್ಣುವಿನಲ್ಲಿ ಎಲ್ಲಾ ಗುಣಗಳೂ ಇವೆ, ಆದರೆ ಲಕ್ಷ್ಮಿ ಅವನಿಗೆ ಬೇಕಿಲ್ಲ. ವಿಷ್ಣುವಿನ ಈ ನಿಸ್ಪೃಹತೆ ಲಕ್ಷ್ಮಿಯನ್ನು ಆಕರ್ಷಿಸಿತು. ಕಡೆಗೆ ಅವನ ಕೊರಳಿನಲ್ಲಿ ಜಯಮಾಲೆ ಹಾಕಿದಳು.

ವಿಲೋಕಯನ್ತಿ ನಿರವದ್ಯಮಾತ್ಮನಃ
ಪದಂ ಧ್ರುವಂ ಚಾವ್ಯಭಿಚಾರಿ ಸದ್ಗುಣಮ್ ।
ಗಂಧರ್ವ ಯಕ್ಷಾ ಸುರಸಿದ್ಧ ಚಾರಣ
ತ್ರೈವಿಷ್ಟಪೇಯಾದಿಷು ನಾನ್ವವಿನ್ದತ ॥
ನೂನಂ ತಪೋಯಸ್ಯ ನ ಮನ್ಯುನಿರ್ಜಯೋ
ಜ್ಞಾನಂ ಕ್ವಚಿತ್ತಚ್ಚ ನ-ಸಂಗವರ್ಜಿತಮ್,
ಕಶ್ಚಿನ್ಮಹಾಂಸ್ತಸ್ಯ ನ ಕಾಮನಿರ್ಜಯಃ ।
ಸ ಈಶ್ವರಃ ಕಿಂ ಪಂತೋವ್ಯಪಾಶ್ರಯಃ
ಧರ್ಮಂ ಕ್ವಚಿತ್ತತ್ರ ನ ಭೂತ ಸೌಹೃದಂ
ತ್ಯಾಗಃಕ್ವಚಿತ್ತತ್ರ ನ ಮುಕ್ತಿಕಾರಣಂ
ವೀರ್ಯಂ ನಪುಂಸೋಽ ಸ್ತ್ಯಜವೇಗನಿಷ್ಕೃತಂ
ನ ಹಿ ದ್ವಿತೀಯೋ ಗುಣಸಂಗವರ್ಜಿತಃ
ಕ್ವಚಿಚ್ಚಿರಾಯುರ್ನ ಹಿ ಶೀಲಮಂಗಲಂ
ಕ್ವಚಿತ್ತದಪ್ಯಸ್ತಿ ನ ವೈದ್ಯಮಾಯುಷಃ
ಯತ್ರೋಭಯಂ ಕುತ್ರಚಸೋಪ್ಯಮಂಗಲಃ
ಸುಮಂಗಲಃ ಕಶ್ಚ ಕಾಂಕ್ಷತೇಹಿಮಾಮ್

ಲಕ್ಷ್ಮಿಗೆ ಸ್ವಾಮಿಯಾಗಬಯಸುವವನಲ್ಲಿ ತಪಸ್ಸು, ಅಕ್ರೋಧ, ಜ್ಞಾನ, ಅನಾಸಕ್ತಿ, ಇಂದ್ರಿಯನಿಗ್ರಹ, ನಿರಾಶ್ರಯವೃತ್ತಿ ಇರಬೇಕು. ಅವನು ಧರ್ಮೋಪಾಸಕ, ಸ್ನೇಹಾರ್ದ್ರ ತ್ಯಾಗಿ, ವೀರ, ನಿಸ್ಪೃಹ ಆಗಬೇಕು. ಧನದ ಹಿಂದೆ ಓಡುವವನ ಬಳಿ ಲಕ್ಷ್ಮಿ ಹೆಚ್ಚುಕಾಲ ಇರಳು.

ಜಮುನಾಲಾಲರಲ್ಲಿ ಈ ಗುಣವೆಲ್ಲ ಇರಲಿಲ್ಲ. ಆದರೆ ಅವರು ಅದರ ಉಪಾಸಕರಾಗಿದ್ದರು. ಧನವಿಷಯದಲ್ಲಿ ನಿಸ್ಪೃಹತೆ, ಉದಾಸೀನತೆ ಅವರಲ್ಲಿ ತುಂಬಿ ತುಳುಕುತ್ತಿತ್ತು. ಆದುದರಿಂದಲೇ ಲಕ್ಷ್ಮಿ ಅವರನ್ನು ವರಿಸಿದಳು.

ಬಾಲ್ಯದಿಂದಲೇ ಅವರಲ್ಲಿ ಧನದ ಮೇಲಿನ ತಿರಸ್ಕಾರ ಹೆಪ್ಪುಗಟ್ಟಿತ್ತು. ಅವರು ಹುಟ್ಟಿದುದು ಬಡತಂದೆತಾಯಿಯ ಮನೆಯಲ್ಲಿ.

ಆದರೆ ದತ್ತುಬಂದ ಮನೆ ಪೂರ್ಣ ಐಶ್ವರ್ಯವಂತರದು. ತಾತ ಬಚ ರಾಜರಿಗೆ ಮೊಮ್ಮಗ ಜಮುನಾಲಾಲರನ್ನು ಕಂಡರೆ ಬಹು ಪ್ರೀತಿ. ಎಷ್ಟಾದರೂ ದತ್ತು ದತ್ತೇ. ಬಚರಾಜರ ಸ್ವಭಾವ ಕೋಪದ್ದು. ಒಂದು ದಿನ ಕೋಪದಲ್ಲಿ ಬಚರಾಜರು ಹುಡುಗ ಜಮುನಾಲಾಲರನ್ನು ಬೈದರು. ನಿನಗೆ ನನ್ನ ಹಣ ಕಂಡರೆ ಅಕ್ಕರೆಯೇ ವಿನಾ ನನ್ನಲ್ಲಿ ಪ್ರೀತಿಯಿಲ್ಲ; ಆದುದರಿಂದ ನೀನು ನಿನ್ನ ಹೆತ್ತ ತಂದೆ ತಾಯಿ ಬಳಿಗೆ ಹೋಗು ಎಂದು ಗದರಿಸಿದರು.

ಜಮುನಾಲಾಲರಂಥ ಆತ್ಮಗೌರವ ಉಳ್ಳ ಬಾಲಕನಿಗೆ ಇದರಿಂದ ನೋವಾಗಬೇಕಾಗಿತ್ತು. ಆದರೆ ಈ ಘಟನೆಯಿಂದ ಅವರ ನೈಸರ್ಗಿಕ ಗುಣವನ್ನು ಪ್ರಕಟಿಸುವ ಸದವಕಾಶ ದೊರೆತಂತಾಯಿತು. ಕೂಡಲೇ ಗಂಟು ಮೂಟೆ ಕಟ್ಟಿ ಮನೆಯಿಂದ ಹೊರಹೊರಟರು. ಐಶ್ವರ್ಯಕ್ಕೆ ಎಳ್ಳು ನೀರು ಬಿಟ್ಟು ತಮ್ಮ ನಿರ್ಲೋಭದ ಅದ್ಭುತ ಪರಿಚಯವನ್ನು ಮಾಡಿಕೊಟ್ಟರು.

ಜಮುನಾಲಾಲರನ್ನು ಹೊರಹೊರಡಿಸುವುದು ಸಾಧ್ಯವಿಲ್ಲವೆಂದು ಪ್ರಾಯಶಃ ಬಚರಾಜರು ಯೋಚಿಸಿದರೋ ಏನೋ. ದತ್ತುಮಗನಿಗೆ ಕಾನೂನು ಪ್ರಕಾರ ಹಿಸ್ಸೆಯುಂಟು. ಜಮುನಾಲಾಲರು ತಮ್ಮ ಭಾಗ ಕೇಳಬಹುದಾಗಿತ್ತು. ನ್ಯಾಯಾಸ್ಥಾನದಲ್ಲಿ ವ್ಯವಹಾರ ಹೂಡಬಹುದಾಗಿತ್ತು. ಆದರೆ ಅವರು ಹಾಗೆ ಮಾಡಲಿಲ್ಲ. ಬಚರಾಜರಿಗೆ ಒಂದು ಪತ್ರ ಬರೆದರು. ಬರೆದು, ಕಾನೂನೀ ಹಕ್ಕುಬಾಧ್ಯತೆಯಿಂದ ನಿವೃತ್ತರಾದರು. ತಾವು ಬರೆದ ಪತ್ರದ ಮೇಲೆ ಕಾನೂನಿಗೆ ತಕ್ಕಂತೆ ಸ್ಟಾಂಪ್ ಅಂಟಿಸಿದ್ದರು. ಹುಡುಗನ ಈ ತ್ಯಾಗ, ನಿರ್ಭಯ, ಆತ್ಮಗೌರವ, ಧರ್ಮಭೀರುತೆ, ಸ್ವಾಶ್ರಯತೆ ಕಂಡು ಬಚರಾಜರಿಗೆ ದುಃಖವಾಯಿತು. ಅಹಿಂಸೆಗೆ ವಿಜಯ ದೊರೆಯಿತು. ಬಚರಾಜರಿಗೆ ತಮ್ಮ ತಪ್ಪಿನ ಅರಿವಾಗಿ ಹುಡುಗನನ್ನು ಹಿಂದಿರುಗಿ ಕರೆಸಿಕೊಂಡರು.

ಅಂದು ಜಮುನಾಲಾಲರು ಬಚರಾಜರಿಗೆ ಬರೆದುದು ಒಂದು ಅಸಾಧಾರಣ ಪತ್ರ. ಜಮುನಾಲಾಲರಿಗೆ ಆಗ ಕೇವಲ ೧೭ ವರ್ಷ. ಎಳೆವಯಸ್ಸಿನಲ್ಲೇ ಬಾಲಕ ಜಮುನಾಲಾಲರಲ್ಲಿದ್ದ ಪರಿಷ್ಕೃತ ವಿಚಾರ,

ನಿರ್ಭಯ, ಆತ್ಮವಿಶ್ವಾಸ, ತ್ಯಾಗಬುದ್ಧಿ, ಧರ್ಮಶ್ರದ್ಧೆ, ದಾನಾಭಿರುಚಿ, ಇದಿರಾಳಿಯ ಬಗ್ಗೆ ಪ್ರೇಮ, ಸ್ಪಷ್ಟೋಕ್ತಿ, ಶುದ್ಧ ಮತ್ತು ಸರಳ ಭಾಷೆ, ಇವುಗಳ ಸಂಪೂರ್ಣ ಪರಿಚಯ ಈ ಪತ್ರದಲ್ಲಿದೆ. ಬಾಲಕ ಜಮನಾ ಲಾಲರಲ್ಲಿದ್ದ ಈ ಗುಣ ಬರಬರುತ್ತಾ ಅರಳತೊಡಗಿತು; ಅವರನ್ನು ಒಬ್ಬ ಮಹಾ ವ್ಯಕ್ತಿಯಾಗಿ ಮಾಡಲು ನೆರವಾಯಿತು. ಅವರು ಬಚರಾಜ ರವರಿಗೆ ಬರೆದ ಆ ಪತ್ರವನ್ನು ಇಲ್ಲಿ ಉದಾಹರಿಸುವುದು ಆವಶ್ಯಕ.

|| ಶ್ರೀಗಣೇಶಜೀ ||

ವರ್ಧಾ ಶುಭಸ್ಥಾನ ನಿವಾಸಿ ಪೂಜ್ಯ ಬಚರಾಜ ರಾಮಘನದಾಸ ರವರ ಚರಣಕಮಲಗಳಲ್ಲಿ ಬಾಲಕ ಜಮನನ ನಮಸ್ಕಾರಗಳು.

ಎಲ್ಲ ಕಾಲಕ್ಕೂ, ಎಲ್ಲೆಡೆಯೂ ಲಕ್ಷ್ಮೀನಾರಾಯಣನ ಸಹಾಯ ವಿದೆ. ಒಂದು ವಿಷಯ ಮಾತ್ರ ತಾವು ಗಮನಿಸಬೇಕು. ತಾವು ಇಂದು ನನ್ನ ಮೇಲೆ ಬಹಳ ಕೋಪಗೊಂಡಿರಿ. ಅದಕ್ಕಾಗಿ ನನಗೆ ವ್ಯಥೆಯಿಲ್ಲ. ಎಲ್ಲವೂ ಪರಮಾತ್ಮನ ಲೀಲೆ. ನಾನು ದತ್ತುಮಗನಾದುದರಿಂದ ತಾವು ಆ ರೀತಿ ಹೇಳಿದಿರಿ. ಇದರಲ್ಲಿ ತಮ್ಮ ತಪ್ಪೇನೂ ಇಲ್ಲ. ನನ್ನನ್ನು ನಿಮಗೆ ದತ್ತು ಕೊಟ್ಟ ತಂದೆತಾಯಿ ತಪ್ಪಿತಸ್ಥರು.

ದಾವಾ ಮಾಡು, ಚಿಂತೆಯಿಲ್ಲ ಎಂದು ತಾವು ಹೇಳಿದಿರಿ. ನನಗೆ ತಮ್ಮಿಂದ ಸಾಲವೇನೂ ಸಲ್ಲಬೇಕಾಗಿಲ್ಲ. ಎಲ್ಲವೂ ತಮ್ಮ ಸ್ವಾರ್ಜಿತ. ತಮಗೆ ಸಂತೋಷವಿದ್ದಂತೆ ಮಾಡಿ. ನನಗೆ ತಮ್ಮ ಮೇಲೆ ಯಾವ ಅಧಿಕಾರವೂ ಇಲ್ಲ.

ಇದುವರೆಗೆ ನನಗಾಗಿ ಅಲ್ಪಸ್ವಲ್ಪ ವೆಚ್ಚವಾಗಿರಬಹುದು. ಇನ್ನು ಮುಂದೆ ಮಾತ್ರ ನಾನು ತಮ್ಮಿಂದ ಒಂದು ಸಮಕಲ ಕಾಸನ್ನೂ ತೆಗೆದು ಕೊಳ್ಳುವುದಿಲ್ಲ. ಇನ್ನೊಬ್ಬರ ಮೂಲಕ ಹೇಳಿಕಳುಹಿಸಿ ತರಿಸಿಕೊಳ್ಳುವು ದಿಲ್ಲ. ತಾವು ಯಾವ ಬಗೆಯ ಆಲೋಚನೆಯನ್ನೂ ಮಾಡಬೇಡಿ. ಇಂದಿನಿಂದ ನನಗೆ ತಮ್ಮ ಮೇಲೆ ಯಾವ ಬಗೆಯ ಹಕ್ಕೂ ಇಲ್ಲ. ತಾವು ಆರೋಗ್ಯವಂತರಾಗಿ ಇನ್ನೂ ೨೦-೨೫ ವರ್ಷ ಬದುಕಬೇಕೆಂದು ನಾನು ಲಕ್ಷ್ಮೀನಾರಾಯಣನನ್ನು ಪ್ರಾರ್ಥಿಸುತ್ತೇನೆ. ಹೋದೆಡೆಯಲ್ಲೆಲ್ಲಾ

ಈ ರೀತಿ ಈಶ್ವರನನ್ನೂ ಪ್ರಾರ್ಥಿಸುತ್ತಾ ಹೋಗುತ್ತೇನೆ. ಇದುವರೆಗಿನ ನನ್ನ ಅಪರಾಧಗಳನ್ನೆಲ್ಲ ಕೃಪೆಮಾಡಿ ಕ್ಷಮಿಸಿ.

ಎಲ್ಲರೂ ಹಣದ ಅಡಿಯಾಳುಗಳು; ನಾನೂ ಸಹ ಹಣಕ್ಕಾಗಿ ತಮ್ಮ ಸೇವೆ ಮಾಡುತ್ತಿರುವೆನೆಂದು ತಮ್ಮ ಅಭಿಪ್ರಾಯವಿರಬಹುದು. ತಮ್ಮ ಹಣದ ಆಸೆ ನನಗೆ ಖಂಡಿತಾ ಇಲ್ಲ. ಈಶ್ವರಾನುಗ್ರಹವಿದ್ದರೆ ತಮ್ಮ ಹಣದ ಆಸೆ ಇನ್ನುಮುಂದೆಯೂ ನನ್ನ ಮನಸ್ಸಿನಲ್ಲಿ ಹುಟ್ಟದು. ನನ್ನ ಅದೃಷ್ಟ ನನ್ನ ಬೆನ್ನಟ್ಟಿ ಬರುತ್ತಿದೆ. ನನ್ನ ಬಳಿ ಹಣವಿದ್ದರೆತಾನೆ ನಾನು ಏನುಮಾಡಬಲ್ಲೆ? ಹಣದೊಡನೆ ಇರುವ ಆಸೆ ನನಗೆ ಖಂಡಿತ ಇಲ್ಲ. ತಮ್ಮ ದಯೆಯಿಂದ ಇಹಕ್ಕೆ ಸುಖವೂ ಪರಕ್ಕೆ ಸಾಧನವೂ ಆದ ದೈವಭಜನೆ, ಸ್ಮರಣೆಮಾಡುತ್ತಾ ಕಾಲ ಕಳೆಯುತ್ತೇನೆ.

ತಾವು ಪ್ರಸನ್ನಚಿತ್ತರಾಗಿರಿ. ಯಾವ ಚಿಂತೆಯನ್ನೂ ಮಾಡಬೇಡಿ. ಪ್ರಪಂಚದ ಬಾಂಧವ್ಯಗಳೆಲ್ಲ ಸುಳ್ಳು, ಒಬ್ಬ ಇನ್ನೊಬ್ಬನ ಮೊಮ್ಮಗನೂ ಅಲ್ಲ, ತಾತನೂ ಅಲ್ಲ. ಎಲ್ಲರೂ ತಮ್ಮ ತಮ್ಮ ಸುಖದ ಜೊತೆಗಾರರು. ಎಲ್ಲವೂ ಸುಳ್ಳು ಸಂಬಂಧ. ತಾವು ಇನ್ನೂ ಮಾಯಾ ಜಾಲದಲ್ಲಿ ಸಿಕ್ಕಿ ತೊಳಲುತ್ತಿದೀರಿ. ಮುಂದೆಯಾದರೂ ದೇವರು ತಮ್ಮನ್ನು ಸಂಸಾರ ಪಾಶದಿಂದ ಉದ್ಧರಿಸಲಿ.

ನಾನು ತಮ್ಮ ಮೇಲೆ ಎಂದಾದರೂ ದಾವಾ ಮಾಡುವೆನೆಂದು ಖಂಡಿತ ಭಾವಿಸಬೇಡಿ. ಇಂದಿನಿಂದ ತಮ್ಮ ಮೇಲಾಗಲೀ, ತಮ್ಮ ಆಸ್ತಿ, ಹಣ, ಆಭರಣ ಮುಂತಾದ ಸಾಮಾನುಗಳ ಮೇಲಾಗಲೀ ನನಗೆ ಯಾವ ಹಕ್ಕೂ ಇಲ್ಲವೆಂಬುದನ್ನು ಸ್ವಂತ ಇಚ್ಛೆಯಿಂದ ತಮಗೆ ತಿಳಿಯಪಡಿಸುತ್ತೇನೆ. ನಾನು ಬರೆಯುತ್ತಿರುವ ಕಾಗದ ಕಾನೂನಿಗೆ ಅನುಗುಣವಾಗಲೆಂದು ಅದರ ಮೇಲೆ ತಕ್ಕ ಸ್ಟಾಂಪ್ ಅಂಟಿಸಿರುತ್ತೇನೆ. ತಮ್ಮಿಂದ ನನಗೆ ಬರಬೇಕಾದ ಸಾಲ ಯಾವುದೂ ಇಲ್ಲ. ನಾನು ಯಾರಿಗೂ ಒಂದು ಕಾಸೂ ಕೊಡಬೇಕಾಗಿಲ್ಲ. ಬೇರೆ ಸಮಾಚಾರವೇನೂ ಇಲ್ಲ. ಇದೆ; ಆದರೆ ಬರೆಯಲಾರೆ.

೧೯೬೪ನೆ ವೈಶಾಖ ಬಹುಳ ಬಿದಿಗೆ ಮಂಗಳವಾರ

ಪೂಜ್ಯ ಶ್ರೀ ತಾತ ಬಚರಾಜರವರಿಗೆ – ಜಮುನನ ನಮಸ್ಕಾರಗಳು.

ಅತ್ಯಂತ ಗೌರವದಿಂದ—ನನಗೂ ತಮಗೂ ಯಾವ ಲೇವಾದೇವಿಯೂ ಇಲ್ಲ. ಲಕ್ಷ್ಮೀನಾರಾಯಣಸ್ವಾಮಿ ದೇವಸ್ಥಾನದ ಕೆಲಸ ಸರಿಯಾಗಿ ನಡೆಸಿ. ತಮ್ಮ ಕೈಲಾದ ದಾನಧರ್ಮ ವಿಶೇಷವಾಗಿ ಮಾಡಿ. ಬ್ರಾಹ್ಮಣರನ್ನು ಸಾಧುಗಳನ್ನು ಖಂಡಿತ ನಿಂದಿಸಬೇಡಿ. ಬೇಡಿದವರಿಗೆ ಇಲ್ಲೆನ್ನದಿರಿ; ಕೈಲಾದ ಸಹಾಯಮಾಡಿ. ಹೆಚ್ಚು ಏನು ಬರೆಯಲಿ. ಇಷ್ಟರಿಂದಲೇ ಅರ್ಥಮಾಡಿಕೊಳ್ಳಿ.

ನಾನು ತಮ್ಮ ಸಾಮಾನು ಯಾವುದನ್ನೂ ಜೊತೆಯಲ್ಲಿ ಒಯ್ಯುವುದಿಲ್ಲ. ಎಲ್ಲಾ ಇಲ್ಲೇ ಬಿಟ್ಟು ಹೋಗುತ್ತೇನೆ. ಹಾಕಿರುವ ಬಟ್ಟೆ ಮಾತ್ರ ಮೈಮೇಲಿದೆ.

ಜಮುನಾಲಾಲರು ರಾಜಕೀಯ ಪಟುಗಳಾಗಿದ್ದರೇ? ಇದ್ದರು. ಆದರೆ ರಾಜಕೀಯ ಅವರ ಶಾಶ್ವತ ಕಾರ್ಯವಲ್ಲ. ಅವರು ಅನೇಕ ಸಲ ಸೆರೆಮನೆಯ ಯಾತ್ರೆ ಮಾಡಿದರು ; ರಾಜಕೀಯ ಆಂದೋಳನದಲ್ಲಿ ಸದಾ ಪ್ರಮುಖ ಪಾತ್ರ ವಹಿಸಿದರು, ಇವೆಲ್ಲದರಲ್ಲೂ ಪ್ರಸಿದ್ಧರಾದರು. ಆದರೂ ಅವರು ರಾಜಕೀಯ ವಾತಾವರಣದಿಂದ ಬೇರೆ ಇದ್ದರೆಂದರೆ ತಪ್ಪಲ್ಲ. ಆವರ ಸಹಜಾಭಿರುಚಿ ಪರಮಾರ್ಥ, ಪರೋಪಕಾರಗಳಲ್ಲಿ. ರಾಜಕೀಯ ಅವರ ಧ್ಯೇಯವಲ್ಲ; ಪರಮಾರ್ಥದ ಸಾಧನ ಮಾತ್ರ.

ವಾತಾವರಣ, ಪರಿಸ್ಥಿತಿಗೆ ಅನುಗುಣವಾಗಿ ಮನುಷ್ಯ ರೂಪುಗೊಳ್ಳುತ್ತಾನೆ. ತೇಜೋಶಾಲಿಯೊಬ್ಬ ರಾಜಕೀಯ ಮುಖಂಡನಾಗಿದ್ದರೆ ಆ ತೇಜಸ್ಸಿಗೆ ಅವನ ರಾಜಕೀಯವೇ ಕಾರಣವೆಂದು ನಾವು ತಿಳಿದುಕೊಳ್ಳುತ್ತೇವೆ. ಅದು ಶುದ್ಧ ತಪ್ಪು. ನಿಜಾಂಶ ಇದರ ತೀರಾ ವಿರುದ್ಧ. ತೇಜಸ್ಸು, ಪರೋಪಕಾರಬುದ್ಧಿ, ನಿರ್ಭಯ ಇವೇ ಆ ತೇಜಸ್ವಿಯ ಮೂಲಗುಣ. ರಾಜಕೀಯ ಅಥವಾ ಇತರ ಪ್ರಭಾವಪೂರ್ಣ ಕಾರ್ಯ ಅವನ ಹೃದಯಸ್ಥ ಗುಣದ ಲಕ್ಷಣ ಮಾತ್ರ. ಆಯಾ ಕಾಲದ ಅಗತ್ಯಾನುಸಾರ ಆ ಲಕ್ಷಣ ರೂಪಗೊಂಡು ಭಿನ್ನಭಿನ್ನ ಪ್ರಯತ್ನಗಳ ಮೂಲಕ ತನಗೆ ತಾನೆ ಹೊರಹೊಮ್ಮುತ್ತದೆ. ಅಶೋಕ, ತುಳಸೀದಾಸರು ಅವರವರ ಕಾಲಕ್ಕೆ ಮಹಾವ್ಯಕ್ತಿಗಳು. ಅವರ ಪ್ರವೃತ್ತಿ ಭಿನ್ನವಾಗಿದ್ದರೂ ಮೂಲ ಸದ್ಗುಣ ಅವರಿಬ್ಬರಲ್ಲಿಯೂ ಒಂದೇ. ಅಂದಿನ ವಾತಾವರಣ, ಪರಿಸ್ಥಿತಿಯ ಪ್ರಭಾವ ಒಬ್ಬರನ್ನು ಸಮ್ರಾಟರನ್ನಾಗಿಯೂ, ಇನ್ನೊಬ್ಬರನ್ನು ಸಾಧುವನ್ನಾಗಿಯೂ ಮಾಡಿ ಲೋಕಕಲ್ಯಾಣಕ್ಕೆ ಕಾರಣವಾಯಿತು.

ಗಾಂಧೀಜೀ ಒಬ್ಬ ಮಹಾವ್ಯಕ್ತಿ ; ರಾಜಕೀಯದಲ್ಲಿ ಅದ್ವಿತೀಯ ಮುಖಂಡರು. ಆದರೆ ವಾಸ್ತವವಾಗಿ ಸತ್ಯಪ್ರಿಯತೆಯೇ ಅವರನ್ನು ರಾಜಕೀಯಕ್ಕೆ ಎಳೆದಿದೆ. ಶುದ್ಧ ಸತ್ಯವೇ ಅವರ ನೈಜಗುಣ. ರಾಜಕೀಯ ಅವರ ಧ್ಯೇಯವಲ್ಲ. ಅದರಿಂದ ಅವರು ಮಹಾವ್ಯಕ್ತಿಗಳಾಗಿಲ್ಲ. ಅವರ

ಮಹತ್ವ ಒಂದು ಸ್ವತಂತ್ರ ವಿಭೂತಿ. ಆ ವಿಭೂತಿಯ ಫಲ ಅವರ ರಾಜನೀತಿ. ಸಾವಿರ ವರ್ಷದ ಹಿಂದೆ ಗಾಂಧೀಜೀ ಹುಟ್ಟಿದ್ದರೆ, ಆಗಲೂ ಅವರಿಗೆ ಇಂದಿನಷ್ಟೇ ಮಹತ್ವ ದೊರೆಯುತ್ತಿತ್ತು; ಆದರೆ ಅವರ ಕಾರ್ಯ ರಾಜಕೀಯವಾಗದೆ ಯಾವುದಾದರೂ ವಾಂಛನೀಯ ಮಾರ್ಗ ಅನುಸರಿಸುತ್ತಿತ್ತು.

**ಯದಾಯದಾಹಿ ಧರ್ಮಸ್ಯ ಗ್ಲಾನಿರ್ಭವತಿ ಭಾರತ**
**ಅಭ್ಯುತ್ಥಾನಮಧರ್ಮಸ್ಯ ತದಾತ್ಮಾನಂ ಸೃಜಾಮ್ಯಹಮ್**

ಇದು ಈಶ್ವರನ ಒಂದು ಪ್ರತಿಜ್ಞೆ. ಸಂತಾಪ ಉಂಟಾದಾಗ ಒಬ್ಬ ದೈವಾಂಶ ಸಂಭೂತ ಹುಟ್ಟಿಬಂದು ಅದನ್ನು ನಿವಾರಿಸುವನೆಂಬುದೇ ಇದರ ಅರ್ಥ. ಯಜ್ಞದ ಹೆಸರಿನಲ್ಲಿನ ಮೂಕ ಪಶುಬಲಿ ನಿಲ್ಲಿಸಿ, ದಿನೇದಿನೇ ಬೆಳೆಯುತ್ತಿದ್ದ ವಿಲಾಸಪ್ರಿಯತೆ, ವಿಷಯವಾಸನೆ ದೂರಮಾಡಲು ಬುದ್ಧನ ಜನ್ಮವಾಯಿತು. ದಲಿತ ಪ್ರಜೆಗಳಲ್ಲಿ ಬೆಳೆಯುತ್ತಿರುವ ಲೋಭ ಸ್ವಭಾವವನ್ನು ತಡೆಯಲು ಕಪ್ಪು, ಹಳದಿ, ಇತರ ಬಣ್ಣದ ಜನರ ದುಃಖ ನಿವಾರಣೆ ಮಾಡಿ ಅವರಿಗೆ ಸ್ವಾತಂತ್ರ್ಯ ಕೊಡಿಸಲು, ಜನತೆಯ ಜಡ ಸ್ವಭಾವವನ್ನು ಕಳೆದು ಪ್ರಪಂಚದಲ್ಲಿ ಅಹಿಂಸೆಯನ್ನು ಸ್ಥಾಪಿಸಲು ಪ್ರಾಯಶಃ ಗಾಂಧೀಜೀ ಜನ್ಮ ತಾಳಿರಬಹುದು. ಧರ್ಮೋದ್ಧಾರವೇ ಅವರಿಬ್ಬರ ಜನ್ಮೋದ್ದೇಶ; ಆದರೆ ಒಬ್ಬರ ಬಾಹ್ಯರೂಪ ಸಂನ್ಯಾಸ; ಇನ್ನೊಬ್ಬರದು ರಾಜಕೀಯ ಮುಂದಾಳುತನ.

ಇದು ಮಹಾತ್ಮರ ಮಾತು.

ಮಧ್ಯಮ ಶ್ರೇಣಿಯ ಜನಜೀವನದಲ್ಲೂ ಧ್ಯೇಯವಿದೆ. ರಾಮನೊಂದಿಗೆ ಕಪಿಗಳು ಹುಟ್ಟಿದರು, ಕೃಷ್ಣನ ಸಂಗಡ ಗೋಪರು ಜನ್ಮ ತಾಳಿದರು. ಬುದ್ಧನೊಡನೆ ಶ್ರಮಣರು ಉದಯಿಸಿದರು. ಗಾಂಧೀಜೀ ಜೊತೆಯಲ್ಲಿ ಅನೇಕ ಮುಖಂಡರು, ಸ್ವಯಂಸೇವಕ ಸೇನೆ.

ಜಮುನಾಲಾಲರು ಸಹ ಪರಮಾರ್ಥ ಸಾಧನೆಗಾಗಿ ಹುಟ್ಟಿದರು. ಅವರ ಬಾಹ್ಯರೂಪ ರಾಜಕೀಯ ಮುಂದಾಳುತನವಾದರೂ ಅವರ ಮನಸ್ಸಿಗೆ ಪ್ರಿಯವಾದುದು, ಅವರ ಮನಸ್ಸಿನಲ್ಲಿದ್ದುದು, ಪರಮಾರ್ಥ. ಬುದ್ಧನ ಕಾಲದಲ್ಲಿ ಅವರು ಹುಟ್ಟಿದ್ದರೆ ಶ್ರಮಣರ ಸೇವೆಗಾಗಿ ದಾನ

ಧರ್ಮ ಮಾಡುತ್ತಾ ಸ್ವತಃ ಶ್ರಮಣರಾಗುತ್ತಿದ್ದರು. ಈ ಕಾಲದಲ್ಲಿ ಜನಿಸಿದರು. ಆದುದರಿಂದ ರಾಜಕೀಯದಿಂದ ಅಲಿಪ್ತರಾಗಿ ಉಳಿಯಲು ಸಾಧ್ಯವಾಗಲಿಲ್ಲ. ಅವರ ಪರಮಾರ್ಥ ಭಾವನೆ ಅವರನ್ನು ರಾಜಕೀಯಕ್ಕೆ ಎಳೆಯಿತೆಂದು ಹೇಳಬಹುದು. ಇದಕ್ಕೆ ಒಂದು ಮನೋಹರ ಇತಿ ಹಾಸವಿದೆ.

ಜಮುನಾಲಾಲರ ಮನೆಯಲ್ಲಿ ಸ್ವಲ್ಪ ಜಮೀನ್ದಾರಿ ಸಹ ಇತ್ತು. ಅವರ ತಾತ ಬಚರಾಜರ ಕಾಲದ ಮಾತು. ಒಂದು ದಿನ ಸರಕಾರಿ ಸಿಪಾಯಿಗಳು ಕಂದಾಯದ ಹಣವನ್ನು ಎತ್ತಿನಗಾಡಿಯ ಮೇಲೆ ಹೇರಿ ಕೊಂಡು ಹೋಗುತ್ತಿದ್ದರು. ಉಚಿತವಾಗಿ ಆಹಾರ ದೊರೆಯುತ್ತದೆಂದು ಅವರು ಬಚರಾಜರ ಜಮೀನ್ದಾರಿ ಮೂಲಕ ಹಾದು ಹೋದರು. ನಿರೀಕ್ಷಣೆಯಂತೆ ಊಟ ಉಪಚಾರವಾಯಿತು. ಆದರೆ ಬೇಕಾದಷ್ಟು ಹಾಲು ತುಪ್ಪ ಸಿಪಾಯಿಗಳಿಗೆ ದೊರೆಯಲಿಲ್ಲ; ಅವರಿಗೆ ಕೋಪ ಬಂತು. ಜಮೀನ್ದಾರಿಯ ಒಬ್ಬ ಆಳನ್ನು ಮನಸ್ವೀ ಹೊಡೆದರು. ಬಚರಾಜರ ಮನೆತನದ ಮಾತಿಗೆ ಸರ್ಕಾರದಲ್ಲಿ ಸಾಕಷ್ಟು ಗೌರವವಿತ್ತು. ಬಚ ರಾಜರು ಗೌರವ ನ್ಯಾಯಾಧೀಶರಾಗಿದ್ದರು. ಅವರು ಆ ಸಿಪಾಯಿಗಳಿಗೆ ಶಿಕ್ಷೆ ಮಾಡಿಸುವ ಪ್ರಯತ್ನ ಮಾಡಿದರು. ಎಷ್ಟೇ ಓಡಾಡಿದರೂ ಬಚ ರಾಜರ ಮನೆತನದವರಿಗೆ ನ್ಯಾಯ ದೊರೆಯಲಿಲ್ಲ. ಜಮುನಾಲಾಲರ ಮನಸ್ಸಿಗೆ ಈ ಘಟನೆಯಿಂದ ಸಾಕಷ್ಟು ನೋವಾಯಿತು. ಪರಮಾರ್ಥ ವೃತ್ತಿ ಜಮುನಾಲಾಲರನ್ನು ರಾಜಕೀಯಕ್ಕೆ ತಳ್ಳಲಾರಂಭಿಸಿತು.

ಇಷ್ಟರಲ್ಲಿ ಇನ್ನೊಂದು ಹಗರಣವಾಯಿತು. ಅವರ ಒಬ್ಬ ಗುಮಾ ಸ್ತನ ನೆಂಟನ ಮನೆಗೆ ಬೆಂಕಿ ಬಿತ್ತು. ಆ ಗುಮಾಸ್ತ ನೆಂಟನ ಮನೆಗೆ ಓಡಿಹೋದ; ಬೆಂಕಿ ಆರಿಸಲು ನೆರವಾದ. ಆ ಮನೆಯಲ್ಲಿ ಬೆಲೆ ಬಾಳುವ ನಗ-ನಾಣ್ಯವಿತ್ತು. ಆ ವೇಳೆಗೆ ಪೋಲೀಸರು ಅಲ್ಲಿಗೆ ಬಂದರು; ದೂರ ಸರಿಯುವಂತೆ ಆ ಗುಮಾಸ್ತನಿಗೆ ಹೇಳಿದರು. ಇಲ್ಲಿ ಸ್ವಲ್ಪ ನಗ-ನಾಣ್ಯವಿದೆ; ಗೊಂದಲದಲ್ಲಿ ಹಾಳಾಗಬಹುದು; ಆದುದರಿಂದ ನಾನು ದೂರ ಸರಿಯುವು ದಿಲ್ಲ, ಇಲ್ಲೇ ಇರುತ್ತೇನೆ ಎಂದು ಆ ಗುಮಾಸ್ತ ಹೇಳಿದ. ಸರಿ, ಪೋಲೀಸರು ಅವನನ್ನು ಯದ್ವಾತದ್ವಾ ಹೊಡೆದರು. ಆ ಬಡಪಾಯಿ

ಅರ್ಧ ಸತ್ತ್ವವನಂತಾದ. ಜಮುನಾಲಾಲರ ತಾತ ಬಚರಾಜರು ಗದ್ದಲ ಮಾಡಲು ಆರಂಭಿಸಿದರು. ಈ ವಿಷಯದಲ್ಲಿ ಕೈ ಹಾಕಿದರೆ ನೀವೂ ತೊಂದರೆ ಅನುಭವಿಸಬೇಕಾದೀತು ಎಂದು ಪೋಲೀಸರು ಬಚರಾಜರಿಗೆ ಎಚ್ಚರಿಕೆ ಕೊಟ್ಟರು. ಎಲ್ಲಿ ನ್ಯಾಯ ಬೇಡುವುದೇ ದೋಷವೋ ಅಲ್ಲಿ ನ್ಯಾಯ ನಿರೀಕ್ಷಣೆ ವ್ಯರ್ಥವೆಂದು ಬಚರಾಜರು ತಿಳಿದುಕೊಂಡರು.

ಮನೆಗೆ ಹೋದರೆ ಮಜ್ಜಿಗೆ ಕೊಡದವಳು ಹೇಳಿಕಳುಹಿಸಿದರೆ ಹಾಲು ಕೊಡುವಳೇ?

ಈ ಘಟನೆಗಳಿಂದ ಜಮುನಾಲಾಲರ ಹೃದಯ ತಲ್ಲಣಿಸಿತು. ಆಗ ಅವರು ಇನ್ನೂ ಅರಿಯದ ಹುಡುಗರು. ಆದರೂ ತಮ್ಮದು ನಿಸ್ಸಹಾಯ ಅವಸ್ಥೆ ಎಂದು ಅವರು ಅರಿತರು. ಈ ನಿಸ್ಸಹಾಯ ಸ್ಥಿತಿ ಕಂಡು ಅವರ ವಿಚಾರವಾಹಿನಿ ವೇಗವಾಗಿ ಹರಿಯಲಾರಂಭಿಸಿತು. ನಾವೇಕೆ ನಿರ್ಬಲರು? ಜಪಾನೀಗಳಂತೆ ಏಕೆ ಮುಂಬರಿಯಲಾರೆವು? ನಮಗೆ ಶಿಕ್ಷಣವೇಕೆ ದೊರೆಯುತ್ತಿಲ್ಲ? ನಮ್ಮ ಬಡತನಕ್ಕೆ ಔಷಧವಿಲ್ಲವೇ? ಇದ್ದರೆ ಏಕೆ ಪ್ರಯೋಗವಾಗಿಲ್ಲ? ನಮಗೆ ನ್ಯಾಯ ದೊರೆಯಲಾರದೆ? ಇತರ ದೇಶಗಳಲ್ಲಿ ಸ್ವತಂತ್ರ ಸರ್ಕಾರವೇಕಿದೆ? ನಮ್ಮಲ್ಲಿ ಪರರ ರಾಜ್ಯವಿರಲು ಕಾರಣವೇನು? ಇದರಿಂದ ಏನು ಹಾನಿ? ಇಂಥಾ ಆಲೋಚನೆಯ ಸುಳಿಯಲ್ಲಿ ಮುಳುಗಿ ತೇಲತೊಡಗಿದರು. ಜಮುನಾಲಾಲರ ಮನಸ್ಸಿನಲ್ಲಿ ಏನೇನು ತರ್ಕವಿತರ್ಕಗಳಾದವೋ ಬಲ್ಲವರಾರು? ಸ್ವರಾಜ್ಯವೇ ಎಲ್ಲ ರೋಗಗಳಿಗೂ ಸಿದ್ಧೌಷಧವೆಂಬ ತೀರ್ಮಾನಕ್ಕೆ ಅವರು ಬಂದರೆಂಬುದನ್ನು ಮಾತ್ರ ನಾವೆಲ್ಲರೂ ಬಲ್ಲೆವು. ಪರಮಾರ್ಥವೃತ್ತಿ ಜಮುನಾಲಾಲರನ್ನು ರಾಜಕೀಯದ ಕಡೆ ಹೆಜ್ಜೆ ಇಡುವಂತೆ ಮಾಡಿತು. ಪೂನಾದ "ಕೇಸರಿ" ಪತ್ರಿಕೆಗೆ ನೂರು ರೂಪಾಯಿ ದಾನ ಕಳುಹಿಸಿದರು. ಅದು ಮುಂದೆ ಅವರು ಮಾಡಿದ ಮಹಾದಾನಗಳ ಮೊದಲ ಕಂತೆಂದು ನಾವು ಭಾವಿಸಬಹುದು. ನೂರು ರೂಪಾಯಿ ಅವರ ದೃಷ್ಟಿಯಲ್ಲಿ ದೊಡ್ಡ ಗಂಟೇನೂ ಅಲ್ಲ. ಆದರೆ ಬಾಲಕ ಜಮುನಾಲಾಲರು ಅದನ್ನು ತಮ್ಮ ಸ್ವಂತ ವೆಚ್ಚದಲ್ಲಿ ಉಳಿಸಿ ಕೊಟ್ಟಿದ್ದರು. ಅದಕ್ಕಾಗಿ ಇಷ್ಟು ಪ್ರಾಶಸ್ತ್ಯ. ತಾತ ಬಚರಾಜರು ಬಾಲಕ ಜಮುನಾಲಾಲರಿಗೆ ಸ್ವಂತ ವೆಚ್ಚಕ್ಕಾಗಿ

ದಿನವೂ ಎಂಟಾಣೆ ಕೊಡುತ್ತಿದ್ದರು. ಅದರಲ್ಲಿ ಮಿಗಿಸಿ ಮಿಗಿಸಿ ಅವರು ೧೦೦ ರೂ. ಕೂಡಿಟ್ಟು "ಕೇಸರಿ" ಪತ್ರಿಕೆಗೆ ಕಳುಹಿಸಿದರು. ದೇಶ ಸೇವೆಗೆ ಇದೇ ಅವರ ಮೊದಲ ದಾನ. ಮುಂದೆ ತಮ್ಮ ಜೀವನದಲ್ಲಿ ಅವರು ಅನೇಕ ದೊಡ್ಡದೊಡ್ಡ ದಾನ ಮಾಡಿದರು. ಈ ಅಲ್ಪ ದಾನದಿಂದ ತಮಗಾದ ಆನಂದ ಲಕ್ಷಾಂತರ ರೂಪಾಯಿ ದಾನದಿಂದ ದೊರೆಯಲಿಲ್ಲ ವೆಂದು ಅವರೇ ಹೇಳಿದಾರೆ.

ಅವರಿಗೆ ತಮ್ಮ ಮಿತಿ ಗೊತ್ತಿತ್ತು. ಪರೋಪಕಾರ ವೃತ್ತಿಯಿಂದಲೇ ರಾಜಕೀಯದಲ್ಲಿ ಸಹಾಯ ಮಾಡಬಲ್ಲೆನೆಂಬುದನ್ನು ಅವರು ಅರಿತಿದ್ದರು. ರಾಜಕೀಯದಲ್ಲಿ ಅಭಿರುಚಿಯುಳ್ಳವರಾಗಿ, ನಿಸ್ವಾರ್ಥ ಸೇವೆ ಮಾಡುವ ರಾಜಕೀಯ ಮುಂದಾಳುಗಳಿಗೆ ಸಹಾಯ ಮಾಡುವುದೇ ತಮ್ಮ ಧರ್ಮ ವೆಂದು ಅವರು ತಿಳಿದಿದ್ದರು. ಎಲ್ಲ ಸಂದರ್ಭಗಳಲ್ಲೂ ಪರೋಪಕಾರಿ ಗಳಾದ ಮಹಾಪುರುಷರ ಸಹವಾಸ ಮಾಡುವುದು ತಮ್ಮ ಕರ್ತವ್ಯ ವೆಂದು ಭಾವಿಸಿದ್ದರು. ಅಂಥ ಸಹವಾಸದಲ್ಲೇ ಅವರು ಇರಲಾರಂಭಿ ಸಿದರು.

ಈ ಮಧ್ಯೆ, ಅನೇಕ ಕಾರಣಗಳು ಇವರನ್ನು ವಾಂಛಿತ ಮಾರ್ಗದಲ್ಲಿ ಹೋಗುವಂತೆ ಪ್ರೇರೇಪಿಸುತ್ತಿದ್ದವು. ಒಂದು ಸಲ ಅವರು ಡಿ. ಎಸ್. ಪಿ. ಯನ್ನು ನೋಡಲು ಹೋಗಿದ್ದರು. ಅವರ ಸಂಭಾಷಣೆಯಲ್ಲಿ ಲೋಕ ಮಾನ್ಯರು ವಿಲಾಯತಿಗೆ ಹೋಗುವ ಮಾತು ಬಂದು "ಈ ಹಡಗು ಮುಳುಗಿಹೋಗಲಿ" ಎಂದ ಆ ಡಿ. ಎಸ್. ಪಿ. ಇಂಗ್ಲಿಷ್ ಅಧಿಕಾರಿಯ ಈ ಮನೋವೃತ್ತಿಯನ್ನು ನೋಡಿ ಜಮನಾಲಾಲರಿಗೆ ದುಃಖವಾಯಿತು. "ನಿಮ್ಮವರೂ ಆ ಹಡಗಿನಲ್ಲಿದಾರೆ; ಅವರೂ ಮುಳುಗಿಹೋಗುತ್ತಾರೆ" ಎಂದು ಅವರು ಆವೇಶಪೂರ್ಣ ಧ್ವನಿಯಲ್ಲಿ ಹೇಳಿದರು. ಇಷ್ಟು ಹೇಳಿ ದರೂ ಅವರ ಮನಸ್ಸಿಗೆ ಶಾಂತಿ ದೊರೆಯಲಿಲ್ಲ. ಡಿ. ಎಸ್. ಪಿ. ಯ ಧೂರ್ತತೆಯ ಮುಂದೆ ಅವರು ನಿಸ್ಸಹಾಯರಾದರು. ಈ ನಿಸ್ಸಹಾಯತೆ ಯಿಂದ ಅವರ ಮನಸ್ಸಿಗೆ ಬಹು ನೋವಾಯಿತು. ರಾಜಕೀಯದಲ್ಲಿ ಆಸಕ್ತಿ ವಹಿಸುವುದು ತಮ್ಮ ನೈತಿಕ ಕರ್ತವ್ಯವೆಂದು ಅವರಿಗೆ ಹೊಳೆಯ ಲಾರಂಭಿಸಿತು. ಆ ಸುಳಿಯಲ್ಲಿ ಅವರು ಸಿಕ್ಕಿದರು.

ಗಂಗಾಪ್ರವಾಹ ಮುಂದಕ್ಕೆ ಹರಿಯಿತು. ದಿನ ಕಳೆದಂತೆಲ್ಲಾ ಜಮುನಾಲಾಲರ ದೇಶಭಕ್ತಿ ಪ್ರಬಲವಾಗತೊಡಗಿತು. ಮುಖಂಡರ ಸಂಸರ್ಗವನ್ನು ಹೆಚ್ಚಿಸಿಕೊಂಡರು. ಮುಂದಾಳುಗಳ ವ್ಯಾಖ್ಯಾನ ಕೇಳಿ ಅದನ್ನು ರಕ್ತಗತ ಮಾಡಿಕೊಳ್ಳುತ್ತಿದ್ದರು. ತಿಲಕರು ಆಗಿನ ಕಾಲದ ಮುಖಂಡರು. ಅವರಿಗೂ ಜಮುನಾಲಾಲರಿಗೂ ಸಂಬಂಧ ಬೆಳೆಯಿತು. ಪೂಜ್ಯ ಮಾಳವೀಯರ ಗುರುತು ಆಗಿತ್ತು. ಉಳಿದ ಮುಖಂಡರ ಗಾಢ ಪರಿಚಯ ಇವರಿಗೆ ಇದ್ದೇ ಇತ್ತು. ಇಷ್ಟಾದರೂ ಇವರ ದೃಷ್ಟಿ ಗಾಂಧೀಜಿಯ ಮೇಲೇ. ಅವರಿಗೆ ಸ್ವರಾಜ್ಯ ದಾಹ; ಆದರೆ ಅದರಡಿಯಲ್ಲಿದ್ದುದು ಧರ್ಮತೃಷ್ಣೆ. ಆದುದರಿಂದ ಇವರು ಸ್ವಾಭಾವಿಕವಾಗಿ ಗಾಂಧೀಜಿ ಕಡೆ ತಿರುಗಿದರು. ಆ ಸೆಳೆತ ದಿನೇದಿನೇ ಬೆಳೆಯಿತು.

ಗಾಂಧೀಜೀ ಆಗ ಆಫ್ರಿಕಾದಲ್ಲಿದ್ದರು. ಗಾಂಧೀಜಿಯನ್ನು ನೋಡುವ ಮುಂಚೆಯೇ ಜಮುನಾಲಾಲರಿಗೆ ಅವರಲ್ಲಿ ಭಕ್ತಿ ನಾಟಿ ಹೋಗಿತ್ತು. ಜಮುನಾಲಾಲರಲ್ಲಿ ದೇಶಭಕ್ತಿಯೊಂದಿಗೆ ಸರಳತೆ, ಆತ್ಮೋದ್ಧಾರದ ತೀವ್ರ ಇಚ್ಛೆ ಇದ್ದವು. ಆದುದರಿಂದ ಗಾಂಧೀಜಿಯ ಕಡೆ ಅವರ ಗಮನ ಹೋದುದು ಸಹಜ. ಗಾಂಧೀಜಿಯ ಅಸಾಧಾರಣ ವ್ಯಕ್ತಿತ್ವ ಇವರನ್ನು ತನ್ನ ಕಡೆ ಎಳೆಯುತ್ತಿತ್ತು. ಗಾಂಧೀಜೀ ಸ್ವದೇಶಕ್ಕೆ ಹಿಂದಿರುಗಿದ ಮೇಲೆ ಅವರ ಸಹವಾಸದಲ್ಲಿಯೆ ಜಮುನಾಲಾಲರು ಕಾಲ ಕಳೆದರು. ಗಾಂಧೀಜಿಗೂ ಇವರ ಸ್ನೇಹ ಬೆಳೆಯಿತು. ಒಂದುದಿನ ಜಮುನಾಲಾಲರು ಅಕಸ್ಮಾತ್ ಗಾಂಧೀಜಿಯನ್ನು "ನಿಮ್ಮಿಂದ ಒಂದು ವರ ಬೇಡುತ್ತೇನೆ" ಎಂದು ಕೇಳಿದರು. ಗಾಂಧೀಜಿಗೆ ಆಶ್ಚರ್ಯವಾಯಿತು. ವರವೇನೆಂಬುದು ಅವರಿಗೆ ತಿಳಿಯಲಿಲ್ಲ.

"ಕೇಳು. ಏನು ಕೇಳುವೆಯೋ ನೋಡೋಣ, ಸಾಧ್ಯವಾದರೆ ಕೊಡುತ್ತೇನೆ."

"ನನ್ನನ್ನೂ ದೇವದಾಸನ ಸಹೋದರ—ತಮ್ಮ ಐದನೆ ಮಗನಂತೆ ಭಾವಿಸಿ. ಇಷ್ಟೇ ನನ್ನ ಬೇಡಿಕೆ."

ಗಾಂಧೀಜಿಗೆ ಸಾನಂದ ಆಶ್ಚರ್ಯವಾಯಿತು. ಅವರು "ತಥಾಸ್ತು" ಎಂದರು. ಗಾಂಧೀಜಿಯ ಮಗನಾಗಲು ಯಾರಿಗಾದರೂ ಯೋಗ್ಯತೆ

ಬೇಕು. ಗಾಂಧೀಜಿಗೆ ದತ್ತುಮಗನಾಗುವುದು, ಶಿಷ್ಯನಾಗುವುದು ಎರಡೂ ಒಂದೇ. ಮಹಾಪುರುಷನಿಗೆ ಮಗನಾಗುವುದಾಗಲಿ, ಶಿಷ್ಯನಾಗುವುದಾಗಲಿ ಹೊರಲಾರದ ಕರ್ತವ್ಯ. ಆತ್ಮೋದ್ಧಾರದ ಒಂದು ವರದಾನವೂ ಹೌದು. ಹೊತ್ತ ಹೊಣೆ ಪೂರೈಸಿದರೆ ಮಹತ್ಕಾರ್ಯವಾಯಿತು. ಇಲ್ಲವಾದರೆ? ಪಾಪಭಾಗಿಯಾಗುವನಲ್ಲವೆ, ಯಾರು ಬಲ್ಲರು? ಸದ್ಭಾವದಿಂದ ಕೆಲಸ ಮಾಡುವವನು ಸಫಲನಾದರೆಷ್ಟು, ವಿಫಲನಾದರೆಷ್ಟು ? ಆದರ ಮಿಕ್ಕ ಹೊಣೆಯನ್ನೂ ದೇವರು ಹೊರುತ್ತಾನೆ. ಆದ್ದರಿಂದ ಅವನು ಹೇಗೆ ಪಾಪಭಾಗಿಯಾಗಬಲ್ಲ?

ಕರ್ಮಣ್ಯೇವಾಽಧಿಕಾರಸ್ತೇ ಮಾ ಫಲೇಷುಕದಾಚನ |

ಏನೇ ಆಗಲಿ ಜಮುನಾಲಾಲರು ಒಂದು ದೊಡ್ಡ ಸಾಹಸಕ್ಕೆ ಅಡಿಯಿಟ್ಟರು; ಗಾಂಧೀಜೀ ಆ ಸಾಹಸಕ್ಕೆ ಉತ್ತೇಜನ ಕೊಟ್ಟರು. ಅಂದಿನಿಂದ ಸಾಯುವವರೆಗೆ ಅವರು ಗಾಂಧೀಜಿಯ ಪುತ್ರತ್ವನಿರ್ವಹಣದಲ್ಲಿ ಕಾಲಕಳೆದರು; ಮನಃಪೂರ್ವಕ ಪ್ರಯತ್ನ ಮಾಡಿದರು.

ಗಾಂಧೀಜಿಯೊಂದಿಗೆ ಸಂಬಂಧ ಬೆಳೆದ ಮೇಲೆ ಅವರ ಬಳಿ ಹೋಗಿ ಬರುವುದು ಹೆಚ್ಚಾಯಿತು. ಇತರ ಮುಖಂಡರೊಂದಿಗೆ ಸಂಪರ್ಕ ಬೆಳೆಯಿತು. ಈ ವಿಷಯ ಸರ್ಕಾರದ ಗಮನಕ್ಕೆ ಹೋಯಿತು. ಆದರೆ ಅದನ್ನು ಅವರು ಲಕ್ಷಿಸಲಿಲ್ಲ. ಇಷ್ಟರಲ್ಲಿ ಅವರಿಗೆ "ರಾವ್‌ಬಹಾದೂರ್" ಬಿರುದು ಬಂತು. ಜಮುನಾಲಾಲರು ಬಿರುದನ್ನು ನಿರಾಕರಿಸಲಿಲ್ಲ. ಇದರಿಂದ ತಮ್ಮ ಧರ್ಮಮಾರ್ಗದಲ್ಲಿ ಅಡಚಣೆಯುಂಟಾಗಲಾರದೆಂದು ಅವರು ಭಾವಿಸಿದ್ದರು. ಧರ್ಮಮಾರ್ಗಕ್ಕೆ ಆತಂಕವಾಗುವುದಾದರೆ ಅದಕ್ಕೆ ಅಂಟಿಕೊಳ್ಳುವ ಮೋಹ ಅವರಲ್ಲಿರಲಿಲ್ಲ.

ಬಿರುದು ಬಂದೊಡನೆ ಅವರು ಗಾಂಧೀಜಿಗೆ ತಿಳಿಸಿದರು. "ನನ್ನನ್ನು ಆಶೀರ್ವದಿಸಿ" ಎಂದು ಪ್ರಾರ್ಥಿಸಿದರು. "ನಾನೇನು ಆಶೀರ್ವಾದ ಮಾಡಲಿ? ದೊರೆತ ಗೌರವವನ್ನು ಸರಿಯಾಗಿ ಉಪಯೋಗಿಸು. ಸನ್ಮಾನದಿಂದ ಆಗುವಷ್ಟು ವ್ಯಕ್ತಿನಾಶ ಅಪಮಾನದಿಂದ ಆಗುವುದಿಲ್ಲ. ಸನ್ಮಾನ ಭಯಂಕರ ವಸ್ತು; ಇದನ್ನು ನೀನು ಸದುಪಯೋಗ ಪಡಿಸಿಕೊ. ಈ

ಸನ್ಮಾನ ನಿನ್ನ ಆತ್ಮೋನ್ನತಿಯ ಮಾರ್ಗದಲ್ಲಿ ಬಾಧಕವಾಗದಿರಲಿ— ಇದೇ ನನ್ನ ಆಶೀರ್ವಾದ" ಎಂದರು ಗಾಂಧೀಜೀ.

ಗಾಂಧೀಜಿಯ ಆಶೀರ್ವಾದ ಜಮುನಾಲಾಲರಿಗೆ ಶಿರೋಧಾರ್ಯವಾಯಿತು. ಬಿರುದನ್ನೂ ಧರಿಸಿದರು. "ರಾವ್‌ಬಹಾದೂರ್ ಜಮುನಾಲಾಲ್" ಆದರು. ಅವರ ಮನೋಭಾವಕ್ಕೆ ಈ ಬಿರುದು ಕೂಡಿಬರಲಿಲ್ಲ. ಈ ಎರಡರ ಸಮನ್ವಯ ಅಸಾಧ್ಯವಾಯಿತು. ಕಡೆಗೆ ಬಿರುದು ಇವರನ್ನು ಬಿಟ್ಟುಹೋಯಿತು. ಪರೋಪಕಾರದ ಹವನಕುಂಡದಲ್ಲಿ ಈ "ಬಿರುದು" ಹೋಮವಾಯಿತು.

೧೯೧೮ ರ ವಿಷಯ. ನಾಗಪುರದ ಕಮಿಷನರ್ ಮಾಸ್ಕಿಂಗ್ ಇವರನ್ನು ಕರೆಕಳುಹಿಸಿದ. ಇವರು ನಾಗಪುರಕ್ಕೆ ಹೋದರು. ಕಮಿಷನರ ಬಳಿ ದೊಡ್ಡ ಕಾಗದ ಪತ್ರದ ಗಂಟಿತ್ತು. ಪ್ರಾಯಶಃ ಅದು ಇವರ ಬಗ್ಗೆ ತಯಾರಾದ ಗುಪ್ತ ಪೋಲೀಸರ ವರದಿ ಇರಬಹುದು. "ಗಾಂಧೀಜಿಯ ಬಳಿ ಹೋಗಿ ಬರುವುದು ನಿಮ್ಮ ವಾಡಿಕೆಯೋ" ಎಂದು ಮೊದಲು ಆದರ ಪೂರ್ವಕವಾಗಿ ಕೇಳಿದ.

"ಹೌದು ಸ್ವಾಮಿ."

"ನಿಮ್ಮ ಮನೆಯಲ್ಲಿ ಸರೋಜಿನಿನಾಯುಡು, ನೇಕೀರಾಮ ಶರ್ಮ, ದೇವೀಪ್ರಸಾದ ಕೈತಾ೯ ಮುಂತಾದ ರಾಜಕೀಯ ಕಾರ್ಯಕರ್ತರು ಬಂದು ಇರುವುದು ವಾಡಿಕೆಯೋ"

"ಹೌದು ಸ್ವಾಮಿ."

"ಸರ್ಕಾರ ನಿಮ್ಮನ್ನು ಬಹಳ ಗೌರವದೃಷ್ಟಿಯಿಂದ ನೋಡುತ್ತಿದೆ ಎಂಬುದು ನಿಮಗೆ ಗೊತ್ತಿರಬಹುದು."

"ಗೊತ್ತಿದೆ."

"ನಿಮ್ಮ ಮೇಲೆ ಹೆಚ್ಚು ಹೊಣೆಯಿದೆ."

"ಸರಿ. ನಮ್ಮ ಮನೆಗೆ ಬರುವವರ ರಾಜಕೀಯ ವಿಚಾರಗಳಿಗೂ ನನಗೂ ವಿಶೇಷ ಸಂಬಂಧವಿಲ್ಲ. ನನ್ನ ಅಭಿಪ್ರಾಯದ ಸಂಬಂಧವಾಗಿ ನಿಮ್ಮ ಬಳಿ ಏನಾದರೂ ವರದಿ ಇದ್ದರೆ ನನ್ನನ್ನು ಕೇಳಿ. ನಾನು ಅದಕ್ಕೆ ಸಮಾಧಾನ ಹೇಳುತ್ತೇನೆ. ಅಭಿಪ್ರಾಯಭೇದವಿದ್ದರೂ, ನನ್ನ ಮಿತ್ರರೂ

ನನ್ನಂತೆ ಕೆಲಸಮಾಡುವ ದೇಶಸೇವಕರೊಂದಿಗೆ ಸಂಬಂಧವಿಟ್ಟುಕೊಳ್ಳ ಬಾರದು, ಬೆರೆಯಬಾರದು, ಅವರಿಗೆ ನಮ್ಮ ಮನೆಯಲ್ಲಿ ಸ್ಥಳ ಕೊಡ ಬಾರದು ಎಂಬುದು ಸರ್ಕಾರದ ಇಚ್ಛೆಯಾದರೆ ಅದು ಅತ್ಯಾಚಾರ. ಮನುಷ್ಯತ್ವ ಇರುವ ಯಾರೂ ಇದನ್ನು ಪಾಲಿಸಲಾರರು; ಅಸಂಭವ."

"ನೀವು ಗಾಂಧೀಜಿಯ ಬಳಿ ಹೋಗುತ್ತೀರಿ, ರಾಜಕೀಯ ಪ್ರಕೃತಿಯವರು ನಿಮ್ಮಲ್ಲಿ ಬಂದು ಇರುತ್ತಾರೆ, ಇದರಿಂದ ನಿಮ್ಮ ಮೇಲೆ ಕೆಟ್ಟ ಪರಿಣಾಮವಾಗುವುದಿಲ್ಲ. ನೀವು ಬುದ್ಧಿವಂತರು. ಆದರೆ ಇತರರ ಮೇಲೆ ಇದರಿಂದ ಕೆಟ್ಟ ಪರಿಣಾಮವಾಗುವ ಸಂಭವವಿದೆ. ಆದುದರಿಂದ ನೀವು ಹೆಚ್ಚು ಎಚ್ಚರಿಕೆಯಿಂದ ಕೆಲಸಮಾಡಬೇಕು."

"ನನ್ನ ಪೂರ್ವಪರಿಚಿತರು ಯಾರೇ ಆಗಲಿ, ಅವರ ವಿಚಾರವೇನೇ ಇರಲಿ, ಮನೆಗೆ ಬಂದರೆ ಆತಿಥ್ಯ ಮಾಡುವುದು ನನ್ನ ಧರ್ಮ. ನಾನು ಅವರನ್ನು ತಡೆಯಲಾರೆ. ಗಾಂಧೀಜೀ ನನಗೆ ಪೂಜ್ಯರು. ನಾನು ಅವರ ಸಂಬಂಧ ಬಿಡಲಾರೆ." ಕಮಿಷನರಿಗೆ ಕೋಪ ಬಂತು. ಆವೇಶದಿಂದ ಹೇಳಿದ "ನಿಮ್ಮ ವಿದ್ಯಾಲಯದ ಹೊಸ ಕಟ್ಟಡದ ಆರಂಭೋತ್ಸವವನ್ನು ಕಮಿಷನರ್ ಮಾಡುವುದಿಲ್ಲ."

ಸರ್ ಬೆಂಜಮಿನ್ ರಾಬರ್ಟ್ಸನ್ ಚೀಫ್ ಕಮಿಷನರಾಗಿದ್ದರು. ಮಾರವಾಡಿ ವಿದ್ಯಾಲಯದ ಪ್ರಾರಂಭೋತ್ಸವವನ್ನು ಅವರಿಂದ ಮಾಡಿಸಬೇಕೆಂದು ನಿಶ್ಚಯವಾಗಿತ್ತು. ಕೇವಲ ಜಮುನಾಲಾಲರಿಗಾಗಿ ಚೀಫ್ ಕಮಿಷನರ್ ವಿದ್ಯಾಲಯದ ಪ್ರಾರಂಭೋತ್ಸವ ನಡೆಸಲು ಒಪ್ಪುವುದಿಲ್ಲ ಎಂದು ಈ ಮಾತಿನಿಂದ ವ್ಯಕ್ತವಾಗುತ್ತಿತ್ತು. ಜಮುನಾಲಾಲರಿಗೂ ಚೀಫ್ ಕಮೀಷನರಿಗೂ ಗಾಢಪರಿಚಯವಿತ್ತು. ವಿದ್ಯಾಲಯವನ್ನು ಕಂಡರೆ ಚೀಫ್ ಕಮಿಷನರಿಗೆ ಬಹಳ ಪ್ರೇಮ. ಜಮುನಾಲಾಲರು ಕಮೀಷನರಿಗೆ ಉತ್ತರ ಕೊಟ್ಟರು: "ಚೀಫ್ ಕಮೀಷನರಿಂದ ಪ್ರಾರಂಭೋತ್ಸವ ನೆರವೇರಿಸಬೇಕೆಂಬುದು ವಿದ್ಯಾನಿಲಯ ಸಮಿತಿಯ ಇಚ್ಛೆ. ಒಂದುವೇಳೆ ಅವರು ಮಾಡದಿದ್ದರೆ ಅವರ ಸಂತೋಷ. ನಾನು ಏನುಮಾಡಬಲ್ಲೆ?"

ಕಮಿಷನರಿಗೆ ಹೆಚ್ಚು ಕೋಪ ಬಂತು. ಮೇಜಿನ ಮೇಲೆ ಕೈ ಗುದ್ದಿ ಹೇಳಿದರು:—

"ಸರ್ಕಾರದಿಂದ ನಿಮಗೆ ರಾವ್‌ಬಹದ್ದೂರ್ ಬಿರುದು ಬಂದಮೇಲೆ ಆ ಜನರೊಂದಿಗೆ ಬೆರೆಯಲಾರಂಭಿಸಿದಿರಿ."

ಸರ್ಕಾರದಿಂದ ಬಿರುದು ಬಂದ ಮೇಲೆ ತಾನು ಹೆಸರು ಸಂಪಾದಿಸಲು ರಾಜಕೀಯ ಕ್ಷೇತ್ರಕ್ಕೆ ಧುಮಿಕಿದೇನೆಂಬುದು ಕಮಿಷನರ ಅಭಿಪ್ರಾಯವೆಂದು ತಿಳಿದು, ಜಮುನಾಲಾಲರು ಉತ್ತರವಿತ್ತರು.

"ರಾವ್‌ಬಹಾದೂರ್ ಬಿರುದು ಕೊಡಿರೆಂದು ನಾನು ಎಂದೂ ಸರ್ಕಾರದವರನ್ನು ಬೇಡಲಿಲ್ಲ. ಯಾರಿಂದಲೂ ಪ್ರಯತ್ನ ಮಾಡಿಸಲಿಲ್ಲ. ರಾವ್‌ಬಹದ್ದೂರ್ ಬಿರುದು ಬಂದಮೇಲೆ ನಾನು ಅವರೊಂದಿಗೆ ಬೆರೆಯುತ್ತಿದೇನೆಂಬ ನಿಮ್ಮ ತಿಳುವಳಿಕೆ ಶುದ್ಧ ತಪ್ಪು. ನನ್ನ-ಅವರ ಸಂಬಂಧ ಬಹಳ ಹಳೆಯದು. ನಿಮ್ಮ ಗುಪ್ತ ಪೋಲೀಸರು ಈ ಸುದ್ದಿ ನಿಮಗೆ ತಿಳಿಸದಿದ್ದರೆ ಅದು ನಿಮ್ಮ ಶಾಖೆಯ ಅವಿವೇಕ. ಬೇಕೆಂದರೆ ನನ್ನ-ಅವರ ಸಂಬಂಧ ರಾವ್‌ಬಹದ್ದೂರ್ ಬಿರುದು ಬರುವ ಮೊದಲಿನದೆಂದು ಕಾಗದ ಪತ್ರಗಳ ಮೂಲಕ ರುಜುವಾತು ಮಾಡುತ್ತೇನೆ."

"ಒಳ್ಳೆಯದು, ಕಲೆಕ್ಟರನ್ನು ನೋಡಿ ಒಪ್ಪಂದ ಮಾಡಿಕೊಳ್ಳಿ."

"ಒಪ್ಪಂದಕ್ಕೆ ತಕ್ಕ ಮಾತೇ ಇದರಲ್ಲಿರುವಂತೆ ತೋರುವುದಿಲ್ಲ. ನನ್ನಲ್ಲಿಗೆ ಇದುವರೆಗೆ ಬರುತ್ತಿದ್ದವರು ಇನ್ನುಮುಂದೆಯೂ ಬರುತ್ತಾರೆ. ನನಗೆ ಅನೇಕ ಜನ ಸರ್ಕಾರೀ ಅಧಿಕಾರಿಗಳ ಪರಿಚಯವಿದೆ. ಅವರಲ್ಲಿ ಅನೇಕರ ಆಚರಣೆ ನನಗೆ ಅಸಹ್ಯ. ಅವರನ್ನು ಕಂಡರೆ ನನಗೆ ಸ್ವಲ್ಪವೂ ಪ್ರೇಮವಿಲ್ಲ. ಆದರೂ ಅವರು ನನ್ನ ಮನೆಯಲ್ಲಿ ಇಳಿಯುತ್ತಾರೆ, ಅವರಿಗೆ ಆತಿಥ್ಯ ಮಾಡಬೇಕಾಗಿ ಬರುತ್ತದೆ. ಅಂದಮೇಲೆ ಗುಣಾಢ್ಯರಾದ ದೇಶ ಸೇವಕರು ನಮ್ಮಲ್ಲಿಗೆ ಬಂದರೆ ಆತಿಥ್ಯ ಮಾಡಬಾರದು, ಅವರೊಡನೆ ಸಂಬಂಧ ಬೆಳೆಸಬಾರದು ಎಂಬ ತಮ್ಮ ವಾದ ನನಗೆ ಅರ್ಥವಾಗುತ್ತಿಲ್ಲ. ಒಂದುವೇಳೆ ಇದು ನಿಮ್ಮ ಇಚ್ಛೆಯಾದರೆ ಅತ್ಯಾಚಾರವೇ ಸರಿ."

ಇಷ್ಟು ಹೇಳಿ ನೊಂದ ಹೃದಯದಿಂದ ಜಮುನಾಲಾಲರು ಕಮಿಷನರ ಮನೆಯಿಂದ ಹೊರಟುಹೋದರು. ಅವರಿಗೆ ಕಮಿಷನರ ಮೇಲೆ

ಕೋಪ ಬರಲಿಲ್ಲ. ಅವನ ಮನೋಭಾವ ಕಂಡು ದುಃಖವಾಯಿತು. ಏನೇ ಆಗಲಿ, ಕಮಿಷನರಿಗೆ ಜಮನಾಲಾಲರ ಸತ್ವ ಪರಿಚಯವಾಯಿತು. ಜಮನಾಲಾಲರು ಆ ಪರೀಕ್ಷೆಯಲ್ಲಿ ಉತ್ತೀರ್ಣರಾದರು. ಜಮನಾಲಾಲರ ಸ್ವಭಾವ ಹೊಂದಿಕೊಂಡು ಬಾಳುವುದು. ಕಮಿಷನರ ಹೊಲಸು ವರ್ತನೆಯಿಂದ ಸರ್ಕಾರದ ಸಂಪರ್ಕದಲ್ಲಿದ್ದ ಆಶೆ ಪೂರ್ಣ ನಿರಾಶೆಯಾಯಿತು. ಜಮನಾಲಾಲರಿಗೆ ಸರ್ಕಾರದ ಮೇಲಿನ ಮೋಹ ಅಳಿಯಿತು. ಸರ್ಕಾರ ಜಮನಾಲಾಲರನ್ನು ಚೆನ್ನಾಗಿ ಒರೆಹಚ್ಚಿತು. ಎರಡೂ ಕಡೆ ವ್ಯವಹಾರ ಪೂರ್ಣವಾಯಿತು. ಸರ್ಕಾರಕ್ಕೂ ಜಮನಾಲಾಲರಿಗೂ ಇದ್ದ ಅಲ್ಪಸ್ವಲ್ಪ ಸಂಬಂಧ ಸವೆದು ಸಣ್ಣದಾಗುತ್ತ ಬಂತು. ಎರಡೂ ಬೇರೆ ಬೇರೆ ದಾರಿ. ಒಬ್ಬರದು ಪೂರ್ವವಾದರೆ, ಇನ್ನೊಬ್ಬರದು ಪಶ್ಚಿಮ. ಬೆರೆಯುವುದಾದರೂ ಹೇಗೆ? ಜಮನಾಲಾಲರ ಸ್ಥಿತಿ ಮೀರಾಬಾಯಿಯ ಸ್ಥಿತಿಯಂತಿತ್ತು.

" ಸಾಧುಸಂತರ ಸಹವಾಸದಿಂದ ಲೋಕಲಜ್ಜೆ
ಹಾಳಾಯಿತು. ಪ್ರಭುವಿನಲ್ಲಿ ಆಸಕ್ತನಾದ
ಮುಮುಕ್ಷುವಿಗೆ ಏನಾದರೇನು? ಇದನ್ನು
ಎಲ್ಲರೂ ಅರಿಯಿರಿ ಎನ್ನುತ್ತಾಳೆ ಮೀರಾಬಾಯಿ "

ಜಮನಾಲಾಲರಿಗೆ ಸ್ವಭಾವತಃ ಜಗಳ–ಕದನಗಳ ಜೀವನ ಇಷ್ಟವಿರಲಿಲ್ಲ. ಅವರದು ಹೊಂದಿಬಾಳುವ ಸ್ವಭಾವ. ಶಾಂತಿ ಅವರಿಗೆ ಪ್ರಿಯ. ಜನರೊಡನೆ ಪ್ರೇಮ ಬೆಳೆಸುವುದು ಅವರಿಗೆ ಬಲು ಹಿತ. ರಾಜಕೀಯದಲ್ಲಿ ಅವರ ಪ್ರವೇಶ ಪ್ರವೇಶವೇ ಅಲ್ಲ. ರಾಜಕೀಯವೇ ಅವರನ್ನು ತನ್ನೆಡೆಗೆ ಎಳೆದುಕೊಂಡಿತು. ಈ ಪ್ರವೇಶವನ್ನು ಅವರ ಪಾರಮಾರ್ಥಿಕ ವೃತ್ತಿ ಪ್ರೋತ್ಸಾಹಿಸಿತು.

" ಆಗಬೇಕಾದದ್ದಾಯಿತು " ಎನ್ನುತ್ತಾ ಜಮನಾಲಾಲರು ಆಳವಾದ ನೀರಿನಲ್ಲಿ ಇಳಿದರು; ಗಂಗಾಪ್ರವಾಹದೊಂದಿಗೆ ವೇಗವಾಗಿ ಈಸಲಾರಂಭಿಸಿದರು.

೧೯೨೦ ರಲ್ಲಿ ಜಮನಾಲಾಲರು ಕಾಂಗ್ರೆಸ್ಸಿನಲ್ಲಿ ಪೂರ್ಣವಾಗಿ ಪ್ರವೇಶಿಸಿದರು. ಅದಕ್ಕೆ ಮೊದಲು ಅವರು ಕಾಂಗ್ರೆಸ್ ಅಧಿವೇಶನಕ್ಕೆ

ಬಂದು ಹೋಗುತ್ತಿದ್ದರು. ಒಂದು ವರುಷದ ತರುವಾಯ ಗಾಂಧೀಜಿಯ ಅಸಹಕಾರ ಆಂದೋಳನ ಪ್ರಾರಂಭವಾಯಿತು. ಆಗ ಜಮುನಾಲಾಲರು ತಮ್ಮ "ರಾವ್‌ಬಹಾದೂರ್" ಬಿರುದನ್ನು ಸರಕಾರಕ್ಕೆ ಹಿಂದಿರುಗಿ ಕೊಟ್ಟರು. ಗಾಂಧೀಜಿಯ ಸಹವಾಸವಾದಂದಿನಿಂದ ಆಕಾಶದಲ್ಲಿ ಕಾರ್ಮೋಡಗಳು ಗರ್ಜಿಸುತ್ತಿದ್ದವು. ಸೇಟ್ ಜೀವನವನ್ನು ನಿರ್ವಹಿಸುವುದು ತಮಗೆ ಕಠಿನವೆಂದು ಅವರು ಆಗಲೇ ಅರಿತರು. ಅಸಹಕಾರ ಆಂದೋಳನದಲ್ಲಿ ಅವರು ತಮ್ಮ "ರಾವ್‌ಬಹಾದೂರ್" ಬಿರುದನ್ನು ಸರ್ಕಾರಕ್ಕೆ ಹಿಂದಿರುಗಿ ಕೊಟ್ಟು, ತಮ್ಮ ನಿರ್ಭಯವನ್ನು ವ್ಯಕ್ತಪಡಿಸಿದರು. ಸರ್ಕಾರಕ್ಕೆ ಒಂದು ಬಗೆಯ ಎಚ್ಚರಿಕೆ ಕೊಟ್ಟಂತೆಯೂ ಆಯಿತು. ಇದರಿಂದ ಆಗಬಹುದಾದ ಪರಿಣಾಮಗಳಿಗಾಗಿ ಸಿದ್ಧತೆ ಮಾಡತೊಡಗಿದರು. ಮನೆಯಲ್ಲಿಯೇ ಸೆರೆಮನೆಯ ಜೀವನ ಪ್ರಾರಂಭಿಸಿದರು. ಊಟ, ನಿದ್ದೆ, ಇತರ ವ್ಯವಹಾರ ಎಲ್ಲವೂ ಸೆರೆಯ ಜೀವನದಂತೆಯೆ. ಈ ಅಭ್ಯಾಸದಿಂದ ಸೆರೆಮನೆಯ ನಿತ್ಯಜೀವನ ಕಷ್ಟಮಯವಾಗಲಿಲ್ಲ. ಅಸಹಕಾರ ಆಂದೋಳನದಲ್ಲಿ ಅವರು ಸೆರೆಗೆ ಹೋಗಬೇಕಾಗಿ ಬರಲಿಲ್ಲ. ಆದರೂ ಸರ್ಕಾರವೇನು ಸುಮ್ಮನಿರಲಿಲ್ಲ. ಜಮುನಾಲಾಲರ ಭವಿಷ್ಯದ ಎರಕ ಮೂಸೆಯಲ್ಲಿ ಸಿದ್ಧವಾಗಿತ್ತು. ವಿಧಿ ನಿಶ್ಚಯಿಸಿದ್ದ ದಿನವೇ ಅವರು ಸೆರೆಗೆ ಹೋಗಬೇಕಾಗಿತ್ತು. ಆ ದಿನವೂ ಬಂತು. ಉತ್ಸಾಹಭರಿತರಾಗಿ ಬಂಧುಮಿತ್ರರನ್ನು ಬೀಳ್ಕೊಂಡು ಜಮುನಾಲಾಲರು ಪ್ರಥಮ ಕಾರಾಗೃಹ ಯಾತ್ರೆ ಮಾಡಿದರು. ಈ ಸುಯೋಗ ೧೯೨೩ಕ್ಕೆ ಮುಂಚೆ ಬರಲಿಲ್ಲ.

೧೯೨೩ ರಲ್ಲಿ ಮಹಾತ್ಮರು ಸೆರೆಯಲ್ಲಿದ್ದರು. ಶಾಸನಸಭೆಗಳಿಗೆ ಹೋಗಬೇಕೆ ಬೇಡವೆ ಎಂಬ ವಾದವಿವಾದ ಮುಖಂಡರೊಳಗೆ ನಡೆಯುತ್ತಿತ್ತು. ರಾಜಕೀಯ ಕ್ಷೇತ್ರದ ನಾಲ್ಕೂ ಕಡೆ ನಿಸ್ತಬ್ಧತೆಯ ಮೋಡ ಕವಿದಿತ್ತು. ತಮ್ಮ ಸತ್ಯಾಗ್ರಹ ಸ್ವಭಾವವನ್ನು ಪರೀಕ್ಷಿಸುವ ವಿಶೇಷ ಸುಯೋಗವೊಂದು ಜಮುನಾಲಾಲರಿಗೆ ಆಗ ಅಕಸ್ಮಾತ್ ದೊರೆಯಿತು. ಆ ಕಾಲದಲ್ಲಿ ದೇಶಾದ್ಯಂತವೂ ಜನ "ಜಲಿಯನ್‌ವಾಲಾಬಾಗ್ ದಿನ"ವನ್ನು ಆಚರಿಸುತ್ತಿದ್ದರು; ಮೆರವಣಿಗೆ ಹೊರಡಿಸುತ್ತಿದ್ದರು. ನಾಗಪುರ

ದಲ್ಲಿಯೂ "ಜಲಿಯನ್‌ವಾಲಾಬಾಗ್" ದಿನಾಚರಣೆಯಾಯಿತು; ಮೆರವಣಿಗೆ ಹೊರಟಿತು; ನಾಗಪುರದ ಸಿವಿಲ್ ಲೈನ್ಸಿಗೆ ಹೋಗದಂತೆ ಪೋಲೀಸರು ಮೆರವಣಿಗೆಯನ್ನು ತಡೆದರು. ಸಿವಿಲ್ ಲೈನ್ಸ್ ಬಿಳಿಯರ ಬಸದಿಯಲ್ಲ. ಹಿಂದೂಸ್ತಾನಿ, ಬಿಳಿಯರು, ಹಿಂದೂ ಮುಸಲ್ಮಾನರೆಲ್ಲರೂ ಅಲ್ಲಿ ಮನೆಮಾಡಿದ್ದರು. ಬೀದಿಯಲ್ಲಿ ಎಲ್ಲರೂ ಓಡಾಡುತ್ತಿದ್ದರು. ಕಾಂಗ್ರೆಸ್ ಬಾವುಟದೊಡನೆ ಮೆರವಣಿಗೆ ಅಲ್ಲಿಗೆ ಹೋದರೆ ಬಿಳಿಯರು ಕೆರಳುವರೆಂಬ ನೆಪದ ಮೇಲೆ ಬಾವುಟ ಸಮೇತ ಮೆರವಣಿಗೆ ನಿಷಿದ್ಧವಾಯಿತು. ಮಧ್ಯಪ್ರಾಂತದ ಇತರ ಸ್ಥಳಗಳಲ್ಲಿ ಪ್ರಜೆಗಳಿಗೂ ಸರ್ಕಾರಕ್ಕೂ ಬಾವುಟದ ಬಗ್ಗೆ ವಿವಾದ ನಡೆಯುತ್ತಿತ್ತು. ಆದರೆ ನಾಗಪುರದಲ್ಲಿ ಈ ಜಗಳ ಧಗ್ಗೆಂದು ಹತ್ತಿಕೊಂಡಿತು.

ಸಿವಿಲ್ ಲೈನ್ಸಿನ ನಿವಾಸಿಗಳಾದ ಬಿಳಿಯರಿಗೆ ಈ ಮೆರವಣಿಗೆಯಲ್ಲಿ ಆಸಕ್ತಿಯೇ ಇರಲಿಲ್ಲ. ಅವರು ಬಾವುಟದ ವಿರುದ್ಧವಾಗಿ ಯಾವ ಆಕ್ಷೇಪಣೆಯನ್ನೂ ಪೋಲೀಸರಿಗೆ ತಿಳಿಸಿರಲಿಲ್ಲ. ಪೋಲೀಸರು ತಾವಾಗಿಯೇ ಜಗಳವನ್ನು ಗಂಟುಹಾಕಿಕೊಂಡಿದ್ದರು. ಯಾರ ಆಕ್ಷೇಪಣೆಯೂ ಇರಲಿಲ್ಲ; ಆದರೂ ರಾಷ್ಟ್ರಧ್ವಜದ ಮೆರವಣಿಗೆಯ ದೃಶ್ಯ ಪೋಲೀಸರಿಗೆ ಸಹನವಾಗಲಿಲ್ಲ. ಅದನ್ನು ತಡೆದರು. ಮೆರವಣಿಗೆಯೇನೋ ಧ್ವಜ ಸಮೇತ ಹೊರಟಿತು. ಪೋಲೀಸರು ಲಾಠಿ ಪ್ರಯೋಗಿಸಿದರು. ಸತ್ಯಾಗ್ರಹಿಗಳು ಮಾತ್ರ ಸ್ವಲ್ಪವೂ ಕದಲಲಿಲ್ಲ.

ಇದರಿಂದ ಧ್ವಜರಕ್ಷಣೆಗಾಗಿ ಜನರಲ್ಲಿ ಹೊಸ ಉತ್ಸಾಹ ಹೊರಹೊಮ್ಮಿತು. ದಿನವೂ ಸಿವಿಲ್ ಲೈನ್ಸಿನ ಕಡೆ ಧ್ವಜಸಹಿತ ಮೆರವಣಿಗೆ ಹೋಗಲಾರಂಭಿಸಿತು. ದಿನವೂ ಪೋಲೀಸರು ಮೆರವಣಿಗೆಗಾರರನ್ನು ಹಿಡಿ ಹಿಡಿದು ಜೈಲಿಗೆ ತುಂಬುತ್ತಿದ್ದರು. ಮೆರವಣಿಗೆಯ ಮುಂಭಾಗದಲ್ಲಿ ಸತ್ಯಾಗ್ರಹಿಗಳೂ, ಹಿಂಭಾಗದಲ್ಲಿ ನೋಡುವವರೂ ಹೋಗುತ್ತಿದ್ದರು. ಸಿವಿಲ್‌ಲೈನ್ಸ್ ತಲಪುತ್ತಲೇ ಸತ್ಯಾಗ್ರಹಿಗಳು ಇತರರನ್ನು ತಡೆದು ತಾವೇ ಮುಂಬರಿಯುತ್ತಿದ್ದರು. ಪೋಲೀಸರು ಶಸ್ತ್ರಸಜ್ಜಿತರಾಗಿ ಮೊದಲೇ ಸಿದ್ಧ. ಅಲ್ಲಿಗೆ ಹೋಗುತ್ತಲೇ ಸತ್ಯಾಗ್ರಹಿಗಳ ದಸ್ತಗಿರಿಯಾಗುತ್ತಿತ್ತು.

ಧ್ವಜದ ಈ ವಿವಾದ ಅಕಸ್ಮಾತ್ ಉತ್ಪನ್ನವಾಗಿಹೋಯಿತು. ಅನಾಯಾಸವಾಗಿ ದೊರೆತ ಈ ಜಗಳ ಜಮುನಾಲಾಲರಿಗೆ ಸರಿತೋರಿತು.

**"ಯದೃಚ್ಛಯಾ ಚೋಪಪನ್ನಂ ಸ್ವರ್ಗದ್ವಾರಮಪಾವೃತಂ।**
**ಸುಖಿನಃಕ್ಷತ್ರಿಯಾಃ ಪಾರ್ಥ ಲಭಂತೇ ಯುದ್ಧಮೀದೃಶಮ್ ॥**

ಅನಾಯಾಸವಾಗಿ ದೊರೆತ ಈ ಯುದ್ಧವನ್ನು ಜಮುನಾಲಾಲರು ಸ್ವಾಗತಿಸಿದರು. ಮೊದಲಿನಿಂದ ಈ ಸತ್ಯಾಗ್ರಹದ ಸಂಚಾಲನಾ ಭಾರವನ್ನು ಅವರು ವಹಿಸಿ ಬಹು ವಿಜೃಂಭಣೆಯಿಂದ ನೆರವೇರಿಸಿದರು.

ಮೊದಮೊದಲು ಸತ್ಯಾಗ್ರಹಿಗಳಿಗೆ ಸಾದಾ ಸಜ ಕೊಡುತ್ತಿದ್ದರು. ಸಂಗ್ರಾಮಾಗ್ನಿ ಪ್ರಜ್ವಲಿಸಿದಂತೆ ಸರ್ಕಾರದ ಮನೋಭಾವ ಕಠೋರವಾಗುತ್ತ ಬಂತು. ಕಡೆಗೆ ಹೆಚ್ಚು ಜನ ಸತ್ಯಾಗ್ರಹಿಗಳು ಜೈಲಿಗೆ ಹೊರಟರು. ಇತರ ಪ್ರಾಂತದ ಸತ್ಯಾಗ್ರಹಿಗಳೂ ನಾಗಪುರಕ್ಕೆ ಬರಲಾರಂಭಿಸಿದರು. ಸರ್ಕಾರ ಇನ್ನೂ ಹೆಚ್ಚು ದಬ್ಬಾಳಿಕೆ ನಡೆಸಲು ನಿಶ್ಚಯಿಸಿತು; ಕಡೆಗೆ ಜಮುನಾಲಾಲರ ದಸ್ತಗಿರಿಯಾಯಿತು, ಅದರೊಂದಿಗೆ ೨೨೦ ಸತ್ಯಾಗ್ರಹಿಗಳು. ಜಮುನಾಲಾಲರ ಮೊಕದ್ದಮೆ ಅನೇಕ ದಿನ ನಡೆಯಿತು. ಕಡೆಗೆ ೧೮ ತಿಂಗಳ ಕಠಿಣ ಶಿಕ್ಷೆ ವಿಧಿಸಿದರು.

ಸತ್ಯಾಗ್ರಹ ಇನ್ನೂ ಭೀಷಣ ರೂಪತಾಳಿತು. ಸುಮಾರು ೧೨೦೦ ಸತ್ಯಾಗ್ರಹಿಗಳು ಜೈಲಿಗೆ ಹೋಗಿದ್ದರು; ಸತ್ಯಾಗ್ರಹಿಗಳು ತಂಡೋಪತಂಡವಾಗಿ ಸೆರೆಮನೆ ತುಂಬತೊಡಗಿದರು. ಪ್ರತಿಯೊಂದು ಪ್ರಾಂತದಲ್ಲೂ ಸಹಾನುಭೂತಿ ಉಕ್ಕಿ ಹರಿಯಿತು. ಜಮುನಾಲಾಲರ ಬಂಧನದ ನಂತರ ಸರದಾರ ಪಟೇಲರು ಸತ್ಯಾಗ್ರಹ ಸಂಚಾಲನದ ಹೊಣೆ ಹೊತ್ತರು. ಆಗ ಅದಕ್ಕೆ ಹೊಸ ಬಣ್ಣ ಬಂತು. ಕಸ್ತೂರಬಾ ಹೆಂಗಸರ ದೊಡ್ಡ ಗುಂಪಿನೊಂದಿಗೆ ಸತ್ಯಾಗ್ರಹದಲ್ಲಿ ಭಾಗವಹಿಸಲು ಸಿದ್ಧರಾದರು.

ಆಗ ಸರಕಾರ ಕಣ್ಣುತೆರೆಯಿತು. ಬೆಂಕಿ ಆರಿಸುವುದೇ ಗೌರವವೆಂದು ಸರ್ಕಾರ ತಿಳಿಯಿತು. ಒಂದೇ ಸಮನೆ ೫ ತಿಂಗಳು ಯುದ್ಧವಾದ ಮೇಲೆ ಸರ್ಕಾರ ಸೋಲೊಪ್ಪಿತು. ನಿರಾತಂಕವಾಗಿ ಸಿವಿಲ್ ಲೈನ್ಸಿಗೆ ಧ್ವಜಸಹಿತ ಮೆರವಣಿಗೆ ಹೋಗಲು ಅವಕಾಶವಾಯಿತು. ಸೆರೆಯಾಳುಗಳೆಲ್ಲ ಬಿಡುಗಡೆಯಾದರು.

ಜಮುನಾಲಾಲರ ಮುಂದಾಳುತನದಲ್ಲಿ ಈ ರೀತಿ ಧ್ವಜ ಸತ್ಯಾಗ್ರಹಕ್ಕೆ ಜಯವಾಯಿತು. ಜಮುನಾಲಾಲರ ಯಶಸ್ಸು ನಾಲ್ಕೂ ಕಡೆ ಹರಡಿತು.

ಕಾಂಗ್ರೆಸ್ಸಿನ ದೃಷ್ಟಿಯಲ್ಲಿ ಜಮುನಾಲಾಲರ ಮಹತ್ವ ಇನ್ನೂ ಹೆಚ್ಚಿತು. ಅವರ ವ್ಯಾವಹಾರಿಕತೆ ವಿನಯ ತ್ಯಾಗಗಳು ಕಾಂಗ್ರೆಸ್ ಮುಖಂಡರ ಮನಸ್ಸಿನಲ್ಲಿ ನಾಟಿಕೊಂಡವು. ತರುವಾಯ ಜಮುನಾಲಾಲರು ಕಾಂಗ್ರೆಸ್ ವರ್ಕಿಂಗ್ ಕಮಿಟಿ ಸದಸ್ಯರಾದರು. ಅಲ್ಲಿಂದ ಸಾಯುವವರೆಗೆ ಅದರ ಸದಸ್ಯರಾಗಿಯೇ ಇದ್ದರು. ಅನಾರೋಗ್ಯದ ನಿಮಿತ್ತ ಅವರು ಅನೇಕಸಲ ಕಾರ್ಯಕಾರೀ ಸಮಿತಿಯಿಂದ ಹೊರ ಹೋಗಬಯಸಿದರು; ಸ್ನೇಹಿತರು ಅವರ ರಾಜೀನಾಮೆ ಅಂಗೀಕರಿಸಲಿಲ್ಲ. ಧ್ವಜ ಸತ್ಯಾಗ್ರಹಾನಂತರ ಕಾಂಗ್ರೆಸ್ಸಿನ ಪ್ರತಿಯೊಂದು ಕಾರ್ಯದಲ್ಲೂ ಜಮುನಾಲಾಲರು ಭಾಗವಹಿಸಿದರು. ೧೯೩೦ರ ಸತ್ಯಾಗ್ರಹದಲ್ಲಿ ಅವರು ಪುನಃ ಸೆರೆಮನೆ ಸೇರಿದರು.

ಕಾಂಗ್ರೆಸ್ಸಿನ ಪ್ರತಿಕಾರ್ಯದಲ್ಲಿಯೂ ಪ್ರಮುಖ ಭಾಗವಹಿಸಿದರು; ಆದರೆ ಅವುಗಳಲ್ಲೆಲ್ಲ ಜಯಪುರ ಸತ್ಯಾಗ್ರಹಕ್ಕೆ ಒಂದು ವಿಶಿಷ್ಟ ಸ್ಥಾನವಿದೆ. ನಾಗಪುರ ಸತ್ಯಾಗ್ರಹದಂತೆ ಜಯಪುರ ಸತ್ಯಾಗ್ರಹ ಕೂಡ ಅವರ ಅಖಂಡ ನೇತೃತ್ವದಲ್ಲಿ ನಡೆಯಿತು. ಜಯಪುರ ಸತ್ಯಾಗ್ರಹವೂ ನಾಗಪುರ ಸತ್ಯಾಗ್ರಹದಂತೆ ಅನಾಯಾಸಪ್ರಾಪ್ತವಾದುದು.

ಜಮುನಾಲಾಲರು ಸೀಕರ್ ರಾಜ್ಯದ ಕಾಶೀಕಾವಾಸ ಎಂಬ ಹಳ್ಳಿಯಲ್ಲಿ ಹುಟ್ಟಿದರು. ಸೀಕರ್ ಜಯಪುರ ಸಂಸ್ಥಾನದೊಳಗಿದೆ. ಜಯಪುರ ಸರ್ಕಾರದ ನೀತಿಗನುಸಾರವಾಗಿ ಅದನ್ನು "ಸೀಕರ್ ರಾಜ್ಯ"ವೆಂದಲ್ಲ, "ಸೀಕರ್ ಜಮೀನ್‌ದಾರಿ" ಎಂದು ಕರೆಯುತ್ತಾರೆ. ಸೀಕರ್ ಸಂಸ್ಥಾನದ ಯಜಮಾನ 'ರಾಜ'ನಲ್ಲ; "ರಾವ್‌ರಾಜ". ಸೀಕರ್ ಸಂಸ್ಥಾನಕ್ಕೆ ಒಂದಾನೊಂದು ಕಾಲದಲ್ಲಿ ಅಲ್ಪಸ್ವಲ್ಪ ಆಡಳಿತಾಧಿಕಾರವಿತ್ತು. ಈಚೆಗೆ ಜಯಪುರದ ದರಬಾರಿನವರು ಅದನ್ನು ಕಿತ್ತುಕೊಂಡರು. ಈಗ ಸೀಕರ್‌ಪ್ರಾಂತ ಬ್ರಿಟಿಷ್ ಹಿಂದೂಸ್ಥಾನದ ಒಂದು ಜಮೀನ್‌ದಾರಿಯಂತೆ ಉಳಿದಿದೆ. ಜಮುನಾಲಾಲರು ಸೀಕರಿನ ಪ್ರಜೆ; ಸೀಕರ್ ರಾವ್‌ರಾಜಾ ಸ್ವತಃ ಜಯಪುರ ಸಂಸ್ಥಾನದ ಪ್ರಜೆ. ಈ ರೀತಿ ಜಮುನಾಲಾಲರು ಜಯಪುರದ ಪ್ರಜೆಗೆ ಪ್ರಜೆ.

ಜಮುನಾಲಾಲರು ವಂಶಪಾರಂಪರ್ಯವಾಗಿ ಬ್ರಿಟಿಷ್ ಹಿಂದೂಸ್ಥಾನದ ಪ್ರಜೆಯಾಗಿದ್ದರು; ಆದರೂ ಅವರು ಜನ್ಮಭೂಮಿಯನ್ನು ಮರೆತಿರಲಿಲ್ಲ. ತಾನು ದೇಶೀಯ ಸಂಸ್ಥಾನದ ಪ್ರಜೆಯೆಂದು ಅವರಿಗೆ ಹೆಮ್ಮೆ.

ಬ್ರಿಟಿಷ್ ಭಾರತ ಸ್ವತಂತ್ರವಾದರೆ ದೇಶೀಯ ಸಂಸ್ಥಾನಗಳಿಗೇಕೆ ಆ ಪುಣ್ಯ ಸಿಗಬಾರದೆಂಬ ಪ್ರಶ್ನೆ ಸ್ವಾಭಾವಿಕವಾಗಿ ಎಲ್ಲರ ಹೃದಯದಲ್ಲೂ ಏಳಬಹುದು. ಇದಕ್ಕೆ ಸರಿಯಾದ ಉತ್ತರವನ್ನು ದೇಶೀಯ ಸಂಸ್ಥಾನದ ಪ್ರಜೆಗಳು ಮಾತ್ರ ಕೊಡಬಲ್ಲರು. ದೇಶೀಯ ಸಂಸ್ಥಾನದಲ್ಲಿ ಸ್ವರಾಜ್ಯ ಸ್ಥಾಪನೆಗೆ ಬ್ರಿಟಿಷ್ ಸರಕಾರವೇ ದೊಡ್ಡ ಪ್ರತಿಬಂಧಕವೆಂದು ಗಾಂಧೀಜಿಯ ಅಭಿಪ್ರಾಯ. ಇದನ್ನು ಜಮುನಾಲಾಲರು ಚೆನ್ನಾಗಿ ಮನನಮಾಡಿ ರಕ್ತಗತ ಮಾಡಿಕೊಂಡಿದ್ದರು. ದೇಶೀಯ ಸಂಸ್ಥಾನದಲ್ಲಿ ಪ್ರಜಾಪ್ರಭುತ್ವ ಸ್ಥಾಪನೆಯಾಗಬೇಕಾದರೆ ಮೊದಲು ದೊಡ್ಡ ಸರ್ಕಾರದೊಡನೆ ಯುದ್ಧಮಾಡು. ಅನಂತರ ರಾಜರ ಹೃದಯ ಪರಿವರ್ತನೆಯ ಪ್ರಯತ್ನ. ಹಾಗಾದಾಗ ಸ್ವರ್ಗದ ಮಹಾದ್ವಾರ ತೆರೆದೀತೆಂದು ನಾವು ಆಶಿಸಬಹುದು. ಈ ರೀತಿ ದೇಶೀಯ ಸಂಸ್ಥಾನಗಳು

ಒಂದು ಸಮಸ್ಯೆಯಾಗಿ ಪರಿಣಮಿಸಿದೆ. ಕೆಲವುವೇಳೆ ದೇಶೀಯ ಸಂಸ್ಥಾನದ ಬೇಡಿಕೆಗಳು ಬ್ರಿಟಿಷ್ ಭಾರತದ ಸ್ವರಾಜ್ಯ ಸ್ಥಾಪನೆಗೆ ಅಡ್ಡಬರುತ್ತದೆ.

ಜಮುನಾಲಾಲರು ಸೀಕರ ಪ್ರಜೆ. ಸೀಕರ ಜಯಪುರದ ಪ್ರಜೆ. ಜಯಪುರ ಬ್ರಿಟಿಷ್ ಸರ್ಕಾರದ ಅಧೀನ! ಈ ತ್ರಿವೇಣಿ ದಾಟಿದ ಮೇಲೆ ಸ್ವರಾಜ್ಯ, ಕನಿಷ್ಠ ಪಕ್ಷ ಸುರಾಜ್ಯ.

ಇಬ್ಬರು ರಾಮರಿದ್ದರೆ ಮೃತ್ಯುವಿನಿಂದ ಮುಕ್ತಿ, ಇಬ್ಬರು ರಾಜರಾದರೆ ತೆರಿಗೆಯಿಂದ ಮುಕ್ತಿ ಎಂಬ ಅರ್ಥದ ಗಾದೆಯೊಂದು ರಾಜಪುತಾನಾದಲ್ಲಿ ಪ್ರಚಲಿತವಾಗಿದೆ. ಇಲ್ಲಿ ಇಬ್ಬರಲ್ಲ ಮೂವರು ರಾಜರು. ಆದರೂ ಕಂದಾಯ ತಪ್ಪುವುದಿರಲಿ, ಎರಡೆರಡುಸಲ ಕಂದಾಯ ಕೊಟ್ಟರೂ ಕಾಟ ತಪ್ಪುತ್ತಿರಲಿಲ್ಲ. ಮೇಲ್ಕಂಡ ಗಾದೆ ಪ್ರಚಲಿತವಾದ ಕಾಲದಲ್ಲಿ ಜನರಿಗೆ ಅನುಕೂಲವಿತ್ತೋ ಏನೋ, ಇಂದಿನ ಬ್ರಿಟಿಷ್ ಸರ್ಕಾರ ಪದ್ಧತಿಯಿಂದ ಇಬ್ಬರು ರಾಜರಿರುವುದರಿಂದ ಬ್ರಿಟಿಷ್ ಸರ್ಕಾರದ ರೊಟ್ಟಿ ತುಪ್ಪಕ್ಕೆ ಬಿದ್ದಂತಾಯಿತೇ ವಿನಾ ಪ್ರಜೆಗಳದಲ್ಲ.

ದೇಶೀಯ ಸಂಸ್ಥಾನದ ಈ ಕಗ್ಗಂಟು ಜಮುನಾಲಾಲರಿಗೆ ಚೆನ್ನಾಗಿ ಅರ್ಥವಾಗಿತ್ತು. ಅವರಿಗೆ ತಮ್ಮ ಸೀಕರ್ ಸಂಸ್ಥಾನದ ರಾಜನಲ್ಲಿ ಪ್ರೀತಿಯಿತ್ತು. ಆ ಪ್ರಜೆಗಳ ಹಿತವನ್ನು ಬಯಸುತ್ತಿದ್ದರು. ಸೀಕರದ ರಾವರಾಜರಿಗೆ ರಕ್ಷಣೆ ದೊರೆಯಬೇಕು; ಜಯಪುರ ರಾಜ ಸ್ವತಂತ್ರ ಆದರ್ಶ ನರೇಶನಾಗಬೇಕು, ಅವರನ್ನು ಪೊಲಿಟಿಕಲ್ ಇಲಾಖೆಯ ನಾಗಪಾಶದಿಂದ ತಪ್ಪಿಸಬೇಕು; ಇದು ಅವರ ಆಸೆ. ಇದಕ್ಕಾಗಿ ಬಹಳ ದುಡಿದರು. ಈ ಧ್ಯೇಯ ಸಾಧನೆಗಾಗಿಯೇ ಅವರ ಕಾರ್ಯಕ್ರಮ ರೂಪುಗೊಳ್ಳುತ್ತಿತ್ತು.

ಜಯಪುರದ ವಿರುದ್ಧವಾಗಿ ಆಗಾಗ ಮಾತನಾಡುವ ಸಂಭವ ಅವರಿಗೆ ಬರುತ್ತಿತ್ತು. ಆದರೆ ನಿಜವಾಗಿ ಅವರು ಜಯಪುರ ರಾಜನ ವಿರೋಧಿಯಾಗಿರಲಿಲ್ಲ; ಬ್ರಿಟಿಷ್ ಸರ್ಕಾರವನ್ನು ಮಾತ್ರ ತೀವ್ರವಾಗಿ ವಿರೋಧಿಸುತ್ತಿದ್ದರು. ಜಯಪುರ ರಾಜನ ರಕ್ಷಣೆಯೇ ಅವರ ಉದ್ದೇಶ; ಅಂತೆಯೇ ರಾಜನ ವಿಶ್ವಾಸಕ್ಕೆ ಪಾತ್ರರಾದರು.

ಜಮುನಾಲಾಲರು ರಾಜಕೀಯ ರಂಗಕ್ಕೆ ಇಳಿದಂದಿನಿಂದ ದೇಶೀಯ ಸಂಸ್ಥಾನದ ಕೆಲಸ ಕಾರ್ಯಗಳಲ್ಲಿ ಆಸಕ್ತಿ ವಹಿಸಲಾರಂಭಿಸಿದರು. ಉದಯಪುರ ಸಂಸ್ಥಾನದ ಬಿಜೋಲಿಯಾದಲ್ಲಿ ಸತ್ಯಾಗ್ರಹ ನಡೆದಾಗ ಜಮುನಾಲಾಲರು ಮಧ್ಯೆ ಪ್ರವೇಶಿಸಿ ಪ್ರಭುತ್ವ ಪ್ರಜೆಗಳ ಹಿತವನ್ನು ಸಾಧಿಸಿದರು. ಈ ಒಪ್ಪಂದದಲ್ಲಿ ಬಿಕಾನೇರ್ ಮಹಾರಾಜರ ಸಹಾಯ ಸಹ ಇವರಿಗೆ ದೊರೆಯಿತು. ಉದಯಪುರ ದರಬಾರಿನವರೂ ಮಂತ್ರಿ ಮಂಡಲದವರೂ ಜಮುನಾಲಾಲರ ಸಫಲ ಪ್ರಯತ್ನಕ್ಕಾಗಿ ಧನ್ಯವಾದ ಅರ್ಪಿಸಿದರು.

ಅವರ ಮನೆ ಜಯಪುರದಲ್ಲಿತ್ತು. ಆದುದರಿಂದ ಜಯಪುರದ ರಾಜಕೀಯದಲ್ಲಿ ಅವರಿಗೆ ತುಂಬಾ ಆಸಕ್ತಿ.

ವಿದ್ಯೆ, ಕಲಾಭಿವೃದ್ಧಿಯ ಚರ್ಚೆಯೇ ಇಲ್ಲದ ಕಾಲದಲ್ಲಿ ಜಯಪುರ ಪ್ರಗತಿಶೀಲ ಸಂಸ್ಥಾನವಾಗಿದ್ದಿರಬಹುದು; ಜನರು ಸರ್ವತೋಮುಖ ಪ್ರಗತಿಯನ್ನೈದುತ್ತಿರುವ ಈ ಕಾಲದಲ್ಲಿ ಜಯಪುರ ಹಿಂದುಳಿದ ರಾಷ್ಟ್ರವಾಗಿರಬಹುದು! ನಿಜಾಂಶ ಇದು. ಇತರ ಸಂಸ್ಥಾನಗಳು ಅವಿದ್ಯೆಯ ಅಂಧಕಾರದಲ್ಲಿ ನಿದ್ರಿಸುತ್ತಿದ್ದಾಗ ಜಯಪುರದಲ್ಲಿ ಜಯಪುರ ಕಾಲೇಜ್, ಕಲಾ ವಿದ್ಯಾಲಯ, ನಗರ ನಿರ್ಮಾಣ ಮುಂತಾದ ಸುಧಾರಣಾ ಚಿಹ್ನೆ ಕಂಡುಬರುತ್ತಿದ್ದುವು. ಆದರೆ ಈಗಂತೂ ಗಾಳಿ ಪೂರ್ಣ ವಿರುದ್ಧ ಮುಖವಾಗಿ ಬೀಸುತ್ತಿದೆ.

ಜಯಪುರದ ಸ್ವರ್ಗೀಯ ಮಹಾರಾಜ ಮಾಧವ ಸಿಂಹರು ಹಿಂದಿನ ಕಾಲದ ಮನೋಭಾವದವರು. ಅವರ ರಾಜ್ಯ ಪದ್ಧತಿಯಲ್ಲಿ ಪ್ರಗತಿಪರ ಜನರಿಗೆ ಸಾಕಷ್ಟು ಸುಧಾರಣಾ ಚಿಹ್ನೆಗಳು ಕಂಡುಬರುತ್ತಿದ್ದುವು. ಯಾರಿಗೂ ಅಸಮಾಧಾನವಿರಲಿಲ್ಲ. ಪ್ರಗತಿ ಕಮ್ಮಿಯಾಗಿದ್ದರೂ ಆತ್ಮೀಯತೆ ಹೆಚ್ಚಾಗಿತ್ತು.

ಅವರ ತರುವಾಯ ಇಂಗ್ಲಿಷರ ಕೈವಾಡ ಪ್ರಾರಂಭವಾಯಿತು. ಹೊಸ ಸುಧಾರಣೆಗಳಾಗಬಹುದೆಂದು ಜನ ನಿರೀಕ್ಷಿಸಿದರು. ಆದರೆ ಏನೊಂದೂ ಆಗಲಿಲ್ಲ. ವೃದ್ಧ ಮಹಾರಾಜರ ಕಾಲದ ಆತ್ಮೀಯತೆ ಸಹ ಮಾಯವಾಯಿತು. ರಾಜಾಸ್ಥಾನದಲ್ಲಿ ಗೌರವಿತರಾಗಿದ್ದವರೂ

ಭಿಕಾರಿಗಳಾದರು. ಜಯಪುರದವರನ್ನು ಕೇಳುವವರೇ ಇಲ್ಲವಾಯಿತು. ಹೊರಗಿನಿಂದ ಅನುಭವಶೂನ್ಯರು ಬಂದು ಉದ್ಯೋಗದಲ್ಲಿ ಸೇರಲಾರಂಭಿಸಿದರು. ಪ್ರಭುತ್ವ ಪ್ರಜೆಗಳ ನಡುವೆ ಕಹಿಯೋ ಸಿಹಿಯೋ ಅಂತೂ ಇದ್ದ ಸಂಬಂಧ ಪೂರ್ಣ ಹಾಳಾಯಿತು. ರಾಜ್ಯದಾಡಳಿತ ನಾಲ್ಕು ಗೋಡೆಗಳ ನಡುವೆ, ಪರದೆ ಹಿಂದೆ ನಡೆಯಲಾರಂಭಿಸಿತು. ದೇಶಭಾಷೆಯಲ್ಲಿ ಹೊರಡುತ್ತಿದ್ದ ಪ್ರಕಟಣೆ ಪರಭಾಷೆಯಾದ ಇಂಗ್ಲಿಷಿನಲ್ಲಿ ಹೊರಡಲಾರಂಭವಾದವು. ಕಚೇರಿಗಳಲ್ಲಿ ಇಂಗ್ಲಿಷ್ ಮೊದಲಾಯಿತು.

ಇಂಗ್ಲಿಷ್ ರಾಜ್ಯಭಾರದ ಸದ್ಗುಣಗಳು ಜಯಪುರಕ್ಕೆ ಮೊದಲೇ ಲಭಿಸಿರಲಿಲ್ಲ. ಈಗಂತೂ ಇಂಗ್ಲಿಷ್ ರಾಜ್ಯಭಾರದ ದುರ್ಗುಣಗಳ ಸಂತೆಯಾಯಿತು. ಪ್ರಜೆಗಳಲ್ಲಿ ಇದರಿಂದ ಅತೃಪ್ತಿ ಬೆಳೆಯಲಾರಂಭಿಸಿತು. ಇದರ ಪರಿಣಾಮವಾಗಿ ೧೯೩೧ರಲ್ಲಿ ಜಯಪುರ ಪ್ರಜಾಮಂಡಲ ರೂಪುಗೊಂಡಿತು; ೧೯೩೮ರ ತನಕ ಅದು ಬಲವಾಗಿ ಬೇರೂರುತ್ತ ಬಂತು. ಈ ಮಧ್ಯೆ ಸೀಕರ್ ರಾವರಾಜನಿಗೂ ಜಯಪುರ ರಾಜಮನೆತನಕ್ಕೂ ಸ್ವಲ್ಪ ಕಿತ್ತಾಟ ಪ್ರಾರಂಭವಾಗಿ ಉಭಯತ್ರರೂ ಗುಂಡು ಹಾರಿಸುವ ಪ್ರಸಂಗ ಬಂತು. ಜಮುನಾಲಾಲರು ಸೀಕರ್ ನಿವಾಸಿ. ರಾವರಾಜನೂ ಅವರೂ ಬಹಳ ಆಪ್ತರು. ಆದ್ದರಿಂದ ಸೀಕರ್ ಸಂಸ್ಥಾನದ ವಿಷಯದಲ್ಲಿ ಅವರು ಆಸಕ್ತಿ ವಹಿಸುವುದು ಸ್ವಾಭಾವಿಕ. ಆಸಕ್ತಿ ವಹಿಸಿಯೂ ವಹಿಸಿದರು. ಅವರ ಪ್ರಯತ್ನ ಸಾರ್ಥಕವೂ ಆಯಿತು. ಜಮುನಾಲಾಲರ ಮಧ್ಯಸ್ಥಿಕೆಯಿಂದ ಸೀಕರ್, ಜಯಪುರ ಪ್ರಭುತ್ವಗಳ ನಡುವೆ ಒಪ್ಪಂದವಾಯಿತು. ಸಾವಿರಾರು ಜನದ ಸಾವು ತಪ್ಪಿತು.

ಜಯಪುರದ ಇಂಗ್ಲಿಷ್ ಮಂತ್ರಿಗೆ ಇದರಿಂದ ಅತೃಪ್ತಿಯಾಯಿತು. ಒಪ್ಪಂದವನ್ನು ಪಾಲಿಸುವ ಬದಲು ಅವನು ಜಮುನಾಲಾಲರು ಜಯಪುರದೊಳಕ್ಕೆ ಕಾಲಿಡಲಾಗದೆಂಬ ಪ್ರತಿಬಂಧಕಾಜ್ಞೆ ಜಾರಿಮಾಡಿದ. ವಿಚಿತ್ರ ಬಹುಮಾನವೇ ಸರಿ.

ಸೀಕರ್ ಒಪ್ಪಂದದಂತೆ ಜಯಪುರದ ದರ್ಬಾರಿನವರು ನಡೆಯಲಿಲ್ಲ. ಇದರಿಂದ ಜಮುನಾಲಾಲರ ಮನಸ್ಸು ನೊಂದಿತು. ಜಮುನಾಲಾಲರ ಮಾತಿನಲ್ಲಿ "ಅದು ಪ್ರಥಮ ತರಗತಿಯ ವಿಶ್ವಾಸಘಾತ."

ಇಂಗ್ಲಿಷ್ ಮಂತ್ರಿ ಈ ಕಠಿಣೋಕ್ತಿ ಲಕ್ಷಿಸಲಿಲ್ಲ. ಕಚೇರಿಯ ನಾಲ್ಕು ಗೋಡೆಗಳ ನಡುವೆ ಅವನು ಅಧಿಕಾರ ನಡೆಸುತ್ತಿದ್ದ. ಅವನಿಗೆ ಸಲಹೆ ಕೊಡುವ ಸಾಹಸಮಾಡುವವರು, ಪ್ರಜೆಯಪರ ಮಾತನಾಡುವವರು ಅವನ ದೃಷ್ಟಿಯಲ್ಲಿ ದಂಗೆಕೋರರಾದರು. ಜಮುನಾಲಾಲರೂ ದಂಗೆ ಕೋರರೇ ! ಜಮುನಾಲಾಲರು ಜಯಪುರದವರಾದರೂ ಆ ಮಂತ್ರಿ ಅವ ರನ್ನು ಪರದೇಶಿಗಳ ಗುಂಪಿಗೆ ಸೇರಿಸಿ ದೇಶದಿಂದ ಓಡಿಸುವ ವರದಾನ ಮಾಡಿದ. ವಿದೇಶೀ ದಿವಾನನಿಗೆ ಸ್ಥಳದ ಪರಿಸ್ಥಿತಿ ಸ್ವಲ್ಪವೂ ತಿಳಿಯದೆ ಇದ್ದರೂ ಸ್ವದೇಶದವನಿಗಿಂತ ಹೆಚ್ಚು ಪರಿಚಿತನಾದವನಂತೆ ಸಾಧಿಸು ತ್ತಾನೆ. ಅವನು ಜಮುನಾಲಾಲರ ಮೇಲೆ ತಿಳಿಯದೆ ತತ್‌ಕ್ಷಣ ಹೊಣೆ ಹೊರಿಸಿದ. ಸೀಕರ್ ಒಪ್ಪಂದದ ಉಲ್ಲಂಘನೆಯಿಂದ ಉಂಟಾದ ಮನಸ್ಸಿನ ಗಾಯ ಜಮುನಾಲಾಲರಿಗೆ ಮಾದಿರಲಿಲ್ಲ; ಅಷ್ಟರಲ್ಲಿಯೇ ನಿಷೇಧಾ ಜ್ಞೆಯ ಇನ್ನೊಂದು ನೋವು ಪ್ರಾಪ್ತವಾಯಿತು. ಈಗ ಮಿತಿ ಮೀರಿತು. ಜಯಪುರದ ಸತ್ಯಾಗ್ರಹ ಪ್ರಾರಂಭ ಇಲ್ಲಿಂದಲೇ.

ಜಮುನಾಲಾಲರು ಜಯಪುರದ ಈ ಆಜ್ಞೆಯನ್ನು ಏಕಾಏಕಿ ಮುರಿಯಲಿಲ್ಲ. ತಮ್ಮ ಎಲ್ಲ ಕೆಲಸವನ್ನೂ ಬದಿಗಿಟ್ಟು ಇಂಗ್ಲಿಷ್ ದಿವಾನನೊಡನೆ ಪ್ರೇಮಪೂರ್ವಕ ಪತ್ರವ್ಯವಹಾರ ಪ್ರಾರಂಭಿಸಿದರು. ಒಪ್ಪಂದಕ್ಕಾಗಿ ಪ್ರಯತ್ನಗಳಾದವು. "ನನ್ನ ಇಚ್ಛೆ ಶುದ್ಧವಾದುದು ; ಜಯಪುರದಲ್ಲಿ ದಂಗೆ ಎಬ್ಬಿಸುವ ಅಭಿಪ್ರಾಯ ನನಗಿಲ್ಲ ; ರಚನಾತ್ಮಕ ಕಾರ್ಯಕ್ರಮದಲ್ಲಿ ನನಗೆ ಅಭಿರುಚಿ ; ಕ್ಷಾಮಪೀಡಿತ ಜನರ ಸೇವೆ ಮಾಡಲು ನಾನು ಜಯಪುರಕ್ಕೆ ಹೋಗುತ್ತಿದೇನೆ ; ಈ ನನ್ನ ಸೇವೆ ಯಿಂದ ಸರ್ಕಾರದ ಹೊಣೆ ಕಡಮೆಯಾಗುತ್ತದೆ" ಎಂದು ಜಮುನಾ ಲಾಲರು ಅನೇಕ ವಿಧದಲ್ಲಿ ದಿವಾನನಿಗೆ ತಿಳಿಯಪಡಿಸಿದರು. ಈ ಮಾತಿ ನಿಂದ ದಿವಾನನಮೇಲೆ ಪರಿಣಾಮವಾಗಲಿಲ್ಲ. ಒಪ್ಪಂದದ ಪ್ರಯತ್ನ ಗಳೆಲ್ಲ ಮುಗಿದುಹೋದಮೇಲೆ, ಬೇರೆ ಮಾರ್ಗವಿಲ್ಲದೆ ಅವರು ಜಯ ಪುರದ ನಿಷೇಧಾಜ್ಞೆಯನ್ನು ಉಲ್ಲಂಘಿಸಲು ತೀರ್ಮಾನಿಸಿದರು. ತಮ್ಮ ಈ ಇಚ್ಛೆಯನ್ನು ದಿವಾನನಿಗೆ ತಿಳಿಸಿದರು. ಆಗ ದಿವಾನನೂ ಎಚ್ಚರ ಗೊಂಡ. ಆದರೆ ಕಾಲ ಮಿಂಚಿಹೋಗಿತ್ತು.

ಕಡೆಗೆ ಜಮುನಾಲಾಲರು ಜಯಪುರದ ಗಡಿ ಪ್ರವೇಶಿಸಿದರು. ಸರ್ಕಾರ ಅವರನ್ನು ಎರಡುಸಾರಿ ಹಿಡಿದು ಸಂಸ್ಥಾನದಿಂದ ಹೊರಕ್ಕೆ ಕಳುಹಿಸಿತು. ಜಮುನಾಲಾಲರು ತೆಪ್ಪನೆ ಕೂಡುವವರಲ್ಲ. ಕಡೆಗೆ ಸರ್ಕಾರ ಅವರನ್ನು ಹಿಡಿಯಲೇ ಬೇಕಾಗಿ ಬಂತು. ಜಯಪುರಕ್ಕೆ ೯೦ ಮೈಲಿ ದೂರವಿರುವ ಒಂದು ನಿರ್ಜನ ಪ್ರದೇಶಕ್ಕೆ ಕರೆದೊಯ್ದು ಅಲ್ಲಿ ದಸ್ತಗಿರಿ ಮಾಡಿದರು. ಇದರಿಂದ ಜನರಲ್ಲಿ ಉತ್ಸಾಹ ಉಕ್ಕಿತು. ಅನೇಕ ಜನ ಸತ್ಯಾಗ್ರಹಿಗಳು ಸೆರೆಮನೆಯಾತ್ರೆ ಪ್ರಾರಂಭಿಸಿದರು. ಒಟ್ಟು ೫೦೦ ಜನ ಸೆರೆಮನೆಗೆ ತೆರಳಿದರು. ಸೆರೆಮನೆಗೆ ಹೋಗುವ ಗುಂಪು ಒಂದರಹಿಂದೊಂದು ಮುನ್ನುಗ್ಗುತ್ತಿತ್ತು. ಜನರ ಉತ್ಸಾಹ ಹೆಚ್ಚುತ್ತಿತ್ತು.

ಈ ಉತ್ಸಾಹ ಹೆಚ್ಚಿಸುವ ಆಸೆ ಗಾಂಧೀಜಿಗೆ ಇರಲಿಲ್ಲ. ಸೆರೆಮನೆಗೆ ಹೋಗುವವರೆಲ್ಲ ಸತ್ಯಾಗ್ರಹಿಗಳಾಗಿಯೂ ಇರಲಿಲ್ಲ. ಇದರ ಪರಿಣಾಮ ಕಲುಷಿತವಾಗುವಂತಿತ್ತು. ಗಾಂಧೀಜೀ ಇತ್ತೀಚೆಗೆ ಸತ್ಯಾಗ್ರಹ ನಿಯಮವನ್ನು ಬಹುಮಟ್ಟಿಗೆ ಬಿಗಿಮಾಡಿದ್ದರು. ಜಯಪುರದ ಸತ್ಯಾಗ್ರಹಿಗಳು ಆ ನಿಯಮಗಳನ್ನು ಪಾಲಿಸಬೇಕೆಂಬುದು ಗಾಂಧೀಜಿಯ ಆಶೆ. ಸತ್ಯಾಗ್ರಹ ಮುಂದುವರಿಸುವುದರಿಂದ ಅನರ್ಹರ ಪ್ರವೇಶಕ್ಕೆ ಅವಕಾಶವಾಗುವುದೆಂಬ ಅನುಮಾನ. ಆದುದರಿಂದ ಅವರು ಜಯಪುರ ಸತ್ಯಾಗ್ರಹವನ್ನು ತಾತ್ಕಾಲಿಕವಾಗಿ ನಿಲ್ಲಿಸಿದರು.

"ಜಮುನಾಲಾಲರೊಬ್ಬರನ್ನೇ ಕಳುಹಿಸಿ ನಾನು ತೃಪ್ತನಾಗುತ್ತಿದ್ದೆ. ಅವರೊಂದಿಗೆ ಅನೇಕರೂ ಸೆರೆಮನೆಗೆ ತೆರಳಿದರು; ಇದರಿಂದ ನನಗೆ ಮನನೋಯಲಿಲ್ಲ; ಆದರೆ ಈಗ ಅಧಿಕ ತ್ಯಾಗದ ಆವಶ್ಯಕತೆ ಇಲ್ಲ. ನೀವೆಲ್ಲರೂ ರಚನಾತ್ಮಕ ಕಾರ್ಯಗಳಲ್ಲಿ ಹೆಚ್ಚಾಗಿ ನಿರತರಾಗಿ" ಎಂಬ ಸಂದೇಶ ಸಾರಿ ಗಾಂಧೀಜೀ ಜಯಪುರ ಸತ್ಯಾಗ್ರಹವನ್ನು ನಿಲ್ಲಿಸಿದರು.

ಈ ರೀತಿ ಸತ್ಯಾಗ್ರಹ ಶಾಂತವಾಯಿತು; ನಿರರ್ಥಕವಾಗಲಿಲ್ಲ. ೬ ತಿಂಗಳು ಸೆರೆಮನೆ ವಾಸಮಾಡಿ ಜಮುನಾಲಾಲರು ಬಿಡುಗಡೆಯಾದರು. ಇಂಗ್ಲಿಷ್ ದಿವಾನ್ ನಿವೃತ್ತನಾದ. ಅವನ ಸ್ಥಾನಕ್ಕೆ ಇನ್ನೊಬ್ಬ ಭಾರತೀಯ ಬಂದ. ಅನಂತರ ಪ್ರಭುತ್ವ ಪ್ರಜಾಮಂಡಲಗಳ ನಡುವೆ ಒಂದು ವ್ಯವಹಾರದ ಒಪ್ಪಂದವಾಯಿತು. ಪ್ರಜೆಗಳಿಗೆ ಸ್ವರಾಜ್ಯ ಸಿಕ್ಕಲಿಲ್ಲ;

ವಾಕ್‌ಸ್ವಾತಂತ್ರ್ಯ ದೊರೆಯಿತು. ವಾಕ್ ಸ್ವಾತಂತ್ರ್ಯಕ್ಕಾಗಿಯೇ ಸತ್ಯಾಗ್ರಹ ಪ್ರಾರಂಭವಾಗಿತ್ತು. ಜಮುನಾಲಾಲರ ಮೇಲಿನ ನಿಷೇಧಾಜ್ಞೆ ವಜಾಆಯಿತು. ಒಪ್ಪಂದದಲ್ಲಿ ಪ್ರಜಾಮಂಡಲದ ಅಸ್ತಿತ್ವ ಸ್ಥಿರವಾಯಿತು. ಜಯಪುರ ಸರ್ಕಾರ ಪ್ರಜಾಮಂಡಲಕ್ಕೆ ಮನ್ನಣೆ ಕೊಟ್ಟಿತು ; ವಾಕ್ ಸ್ವಾತಂತ್ರ್ಯದ ಘೋಷಣೆ ಮಾಡಿತು. ಜಮುನಾಲಾಲರ ಜಯಪುರದ ಸತ್ಯಾಗ್ರಹ ಈ ರೀತಿ ಸಫಲವಾಯಿತು.

ಈ ಸತ್ಯಾಗ್ರಹಾನಂತರ ಜಯಪುರದ ರಾಜನಿಗೂ ಜಮುನಾಲಾಲರಿಗೂ ಪರಸ್ಪರ ಪ್ರೇಮ ಬೆಳೆಯಿತು. ಮೊದಲಿಸಿಂದಲೂ ರಾಜನಲ್ಲಿ ಜಮುನಾಲಾಲರಿಗೆ ಪ್ರೇಮ ; ಜಮುನಾಲಾಲರ ಶುದ್ಧ ಹೃದಯ ಕಂಡು ರಾಜನಿಗೆ ಇವರಲ್ಲಿ ಗೌರವ. ಈ ರೀತಿ ಪರಸ್ಪರ ಆತ್ಮೀಯತೆ ಬೆಳೆಯಿತು. ಆದರೆ ಇದರಿಂದ ಲಾಭದಾಯಕ ಪರಿಣಾಮವೇನೂ ಆಗಲಿಲ್ಲ.

ಜಯಪುರದ ಸೆರೆಮನೆಯಲ್ಲಿ ಇದ್ದಷ್ಟು ದಿನವೂ ಜಮುನಾಲಾಲರು ಜಯಪುರಕ್ಕೆ ಸಂಬಂಧಿಸಿದ ಒಂದಲ್ಲೊಂದು ರಚನಾತ್ಮಕ ಕಾರ್ಯದಲ್ಲಿ ಆಸಕ್ತರಾಗಿದ್ದರು. ಸೆರೆಮನೆಯಲ್ಲಿಯೇ ಅವರಿಗೆ ಕಾಯಿಲೆ ಆಯಿತು. ವೈದ್ಯರು ಚಿಕಿತ್ಸೆಮಾಡಿದರು. ಗುಣವಾಗಲಿಲ್ಲ. ವಿಲಾಯತಿ ಯಾತ್ರೆ ಮಾಡುವಂತೆ ಸಲಹೆ ಕೊಟ್ಟರು. " ನಾನು ಹುಟ್ಟಿದುದು ಇಲ್ಲಿ; ಇಲ್ಲೇ ಸಾಯಬೇಕೆಂದು ನನ್ನ ಆಶೆ. ವಿಲಾಯತಿ ಚಿಕಿತ್ಸೆ ಬಡವರಿಗೆ ಸಾಧ್ಯವಿಲ್ಲ; ಅಂಥದನ್ನು ನಾನು ಹೇಗೆ ಪಡೆಯಲಿ? ಚಿಕಿತ್ಸೆಗಾಗಿ ಪರದೇಶಕ್ಕೆ ಹೋಗುವುದಕ್ಕಿಂತ ಇಲ್ಲೇ ಸಾಯುವುದು ಲೇಸು" ಎಂದರು ಜಮುನಾಲಾಲರು. ಅವರ ಈ ದೃಢವಿಚಾರ ಜಯಪುರದ ಅಧಿಕಾರಿಗಳ ಮನಸ್ಸಿನಲ್ಲಿ ಚೆನ್ನಾಗಿ ನಾಟಿತು. ಕಡೆಗೆ ಅವರನ್ನು ಬಿಡುಗಡೆಮಾಡುವುದೇ ಲೇಸೆಂದು ಅಧಿಕಾರಿಗಳು ಭಾವಿಸಿದರು.

ಜಮುನಾಲಾಲರ ಜಯಪುರದ ಸತ್ಯಾಗ್ರಹ ಅನೇಕ ದೃಷ್ಟಿಯಿಂದ ಸಫಲವಾಯಿತು. ಪ್ರಜೆಗಳ ಸತ್ವ ರಕ್ಷಣೆಯಾಯಿತು. ಜಮುನಾಲಾಲರ ತ್ಯಾಗ, ಪ್ರೇಮಗಳ ಪ್ರಭಾವ ರಾಜರ ಹೃದಯದಲ್ಲಿ ನಾಟಿತು. ಕೆಲಸಗಾರರಿಗೆ ಶಿಕ್ಷಣ ದೊರೆಯಿತು. ಜನತೆಯು ಆತ್ಮವಿಶ್ವಾಸ ಬೆಳೆಯಿತು.

ಜಯಪುರದ ಸತ್ಯಾಗ್ರಹ ಮುಗಿಯುವುದರೊಳಗಾಗಿ ಎರಡನೆ ವಿಶ್ವಮೇಧ ಪ್ರಾರಂಭವಾಯಿತು. ಅನಂತರ ಗಾಂಧೀಜೀ ಮುಂದೆ ನಿಂತು ಪ್ರಾರಂಭಿಸಿದ ಸತ್ಯಾಗ್ರಹದಲ್ಲೂ ಜಮುನಾಲಾಲರು ಭಾಗವಹಿಸಿ ಜೈಲಿಗೆ ಹೋದರು. ಅಲ್ಲಿ ಅವರ ದೇಹಸ್ಥಿತಿ ಬಹಳ ಕೆಟ್ಟುಹೋಯಿತು. ಈ ನೆಪದಮೇಲೆ ಸರ್ಕಾರ ಅವರನ್ನು ಬಿಡುಗಡೆ ಮಾಡಿತು. ಆದರೆ ಜಮುನಾಲಾಲರು ಸುಮ್ಮನೆ ಕೂಡುವವರಲ್ಲ. ಸೆರೆಮನೆಗೆ ಹೋಗುವಷ್ಟು ಆರೋಗ್ಯವಿಲ್ಲದ್ದರಿಂದ ರಚನಾತ್ಮಕ ಕಾರ್ಯದಲ್ಲಿ ನಿರತರಾದರು.

ಗಾಂಧೀಜಿಯ ಸಹವಾಸವಾದಂದಿನಿಂದ ಅವರು ಗಾಂಧೀಜಿಯ ಪ್ರತಿಯೊಂದು ರಚನಾತ್ಮಕ ಕಾರ್ಯದಲ್ಲಿಯೂ, ಪ್ರಾರಂಭವಾದಂದಿನಿಂದಲೂ, ಸಾಧ್ಯವಾದಷ್ಟು ಕೆಲಸಮಾಡಿದಾರೆ. ಅಖಿಲ ಭಾರತ ಚರಖಾ ಸಂಘದ ತಳಹದಿ ಹಾಕಿದವರು ಇವರೇ ಎನ್ನಬಹುದು. ತಿಲಕ್ ಸ್ವರಾಜ್ಯ ನಿಧಿಯ ಬಹುಭಾಗವನ್ನು ಅವರು ಹಟತೊಟ್ಟು ಚರಖಾ ಸಂಘಕ್ಕಾಗಿ ಮೀಸಲಿಡದೇ ಹೋಗಿದ್ದರೆ, ಅದು ಇತರ ರಾಜಕೀಯ ಗೊಂದಲಗಳಿಗೆ ವೆಚ್ಚವಾಗಿ ಹೋಗುತ್ತಿತ್ತು. ಚರಖಾ ಸಂಘ ಸ್ಥಾಪನೆಯಾದ ಅನೇಕ ವರ್ಷಕಾಲ ಅವರು ಆದರ ಅಧ್ಯಕ್ಷರಾಗಿ ಕೆಲಸ ನಡೆಸಿದರು.

ವರ್ಧಾ ಮಹಿಳಾಶ್ರಮ ಸ್ಥಾಪನೆಗೂ ಇವರೇ ಪ್ರೇರಕರು. ಅನೇಕ ವರ್ಷ ಆದರ ಅಧ್ಯಕ್ಷರಾಗಿದ್ದರು. ವರ್ಧಾದಲ್ಲಿ ಇನ್ನೂ ಎಷ್ಟೋ ರಚನಾತ್ಮಕ ಕಾರ್ಯ ನಡೆಯುತ್ತಿದೆ. ಮಾರವಾಡಿ ಶಿಕ್ಷಾಮಂಡಲ, ಮಾರವಾಡಿ ವಿದ್ಯಾರ್ಥಿನಿಲಯ, ಕಾಮರ್ಸ್ ಕಾಲೇಜು ಇವುಗಳ ಸೃಷ್ಟಿಕರ್ತರೂ ಜಮುನಾಲಾಲರೇ. ರಾಷ್ಟ್ರಭಾಷಾ ಪ್ರಚಾರ ಸಮಿತಿ, ಗ್ರಾಮೋದ್ಯೋಗ ಸಂಘ, ಮೂಲಶಿಕ್ಷಣ ಮುಂತಾದುವುಗಳಲ್ಲಿ ಜಮುನಾಲಾಲರ ಸಹಕಾರ ಹಸ್ತ ಸಾಕಷ್ಟಿದೆ. ಇವೆಲ್ಲದರಲ್ಲಿಯೂ ಅವರಿಗೆ ಆಸಕ್ತಿಯಿತ್ತು. ಗಾಂಧೀಜಿಯನ್ನು ಒತ್ತಾಯಪಡಿಸಿ ವಿನೋಬಾರನ್ನು ವರ್ಧಾಕ್ಕೆ ಕರೆತಂದು ಅವರಿಂದ ಆಶ್ರಮ ಸ್ಥಾಪನೆ ಮಾಡಿಸಿದುದು, ಕಡೆಗೆ ಸಾಬರಮತಿಯನ್ನು ಬಿಡಿಸಿ ಗಾಂಧೀಜಿಯನ್ನು ವರ್ಧಾಕ್ಕೆ ಕರೆತಂದುದು

ಜಮುನಾಲಾಲರ ರಚನಾತ್ಮಕಕಾರ್ಯಕ್ರಮಗಳಲ್ಲಿ ಅತಿ ಮುಖ್ಯವಾದವು. ೧೯೩೦ರ ಸತ್ಯಾಗ್ರಹಾನಂತರ ಗಾಂಧೀಜೀ ಸಾಬರಮತಿಯ ಸತ್ಯಾಗ್ರಹಾಶ್ರಮವನ್ನು ತ್ಯಜಿಸಿದರು. ಮುಂದೆ ಎಲ್ಲಿ ನೆಲೆಸಬೇಕೆಂದು ಬಹಳ ಚರ್ಚೆಯಾಯಿತು. ಗಾಂಧೀಜಿಯ ಹತ್ತಿರದ ಸ್ನೇಹಿತರನೇಕರು ತಮ್ಮ ತಮ್ಮ ಪ್ರಾಂತಗಳಿಗೆ ಕರೆದೊಯ್ಯುವ ಪ್ರಯತ್ನ ಮಾಡಿದರು. ಕಡೆಗೆ ಈ ಐದನೇ ಮಗನ ಒತ್ತಾಯಕ್ಕೇ ಜಯವಾಯಿತು; ಗಾಂಧೀಜಿಯ ಸ್ಥಾಯಿ ಆಶ್ರಮ ವರ್ಧಾದಲ್ಲಿ ಸ್ಥಾಪಿತವಾಯಿತು. ಅವರು ವರ್ಧಾಕ್ಕೆ ಬಂದುದರಿಂದ ಅವರ ನಿಕಟ ಸಹವಾಸ ಭಾಗ್ಯ ಜಮುನಾಲಾಲರಿಗೆ ದೊರೆಯಿತು. ಗಾಂಧೀಜೀ ಸಹ ವರ್ಧಾದ ರಚನಾತ್ಮಕ ಕಾರ್ಯದ ಹೊಣೆಯನ್ನು ಜಮುನಾಲಾಲರ ಮೇಲೆ ಹೊರಿಸಿ ತಾವು ನಿಶ್ಚಿಂತರಾದರು.

ಕಡೆಕಡೆಗೆ ಜಮುನಾಲಾಲರ ಆರೋಗ್ಯ ಕೆಡುತ್ತ ಬಂತು. ವಿಶ್ರಾಂತಿ ತೆಗೆದುಕೊಳ್ಳುವಂತೆ ಗಾಂಧೀಜೀ ಎಷ್ಟೋ ಹೇಳಿದರು. ಜಮುನಾಲಾಲರಿಗೆ ವಿಶ್ರಾಂತಿ ಎಲ್ಲಿ? ಎಲ್ಲ ರಾಜಕೀಯ ಕೆಲಸದಿಂದಲೂ ನಿವೃತ್ತರಾಗಿ ಗೋಸೇವೆಯಲ್ಲಿ ತಮ್ಮ ಕೊನೆಯ ದಿನಗಳನ್ನು ಕಳೆಯಲು ನಿರ್ಧರಿಸಿದರು.

ಈ ರೀತಿ ರಾಜಕೀಯವನ್ನೆಲ್ಲ ಬಿಡುವುದು ಅವರಿಗೆ ಇಷ್ಟವಿರಲಿಲ್ಲ. ಹಿಡಿದ ಕೆಲಸದಲ್ಲಿ, ತಮ್ಮ ಕಾಲವನ್ನೆಲ್ಲಾ ವಿನಿಯೋಗಿಸಿ ಅದನ್ನು ವೀರಶ್ರದ್ಧೆಯಿಂದ ಮಾಡುವುದು ಅವರ ಸ್ವಭಾವ. ರಾತ್ರಿ, ಹಗಲು ಅವರಿಗೆ ಲಕ್ಷ್ಯವಿರಲಿಲ್ಲ. ತಮ್ಮ ಆರೋಗ್ಯವನ್ನು ಪೂರ್ಣ ಮರೆಯುತ್ತಿದ್ದರು. ಆರೋಗ್ಯ ಕೆಟ್ಟಿದ್ದರೂ ಅವರು ಹಗಲಿರುಳೂ ಗೋಸೇವೆಯಲ್ಲೇ ನಿರತರಾಗಿದ್ದರು. ಊಟ-ತಿಂಡಿ, ಸ್ನಾನ-ನಿದ್ರೆ ಯಾವಾಗಲೂ ಅವರಿಗೆ ಒಂದೇ ಯೋಚನೆ. ಗೋಸೇವೆ ಅವರ ಉಸಿರಾಗಿ ಹೋಯಿತು. ಸಾಯುವುದಕ್ಕೆ ಕೆಲವು ದಿನ ಮುಂಚೆ ಅವರು ಗೋಶಾಸ್ತ್ರ, ಗೋಸೇವೆಯಲ್ಲಿ ನಿಪುಣರಾದವರ, ಆಸಕ್ತಿ ವಹಿಸುವವರ ಒಂದು ಕೂಟವನ್ನು ಸೇರಿಸಿದ್ದರು; ಅದರ ಪ್ರಾರಂಭೋತ್ಸವ ನೆರವೇರಿಸಿದವರು ಗಾಂಧೀಜೀ. ವಿನೋಬಾ ಅದರ ಅಧ್ಯಕ್ಷರು. ಅವರಿಬ್ಬರೂ ತಮ್ಮ ತಮ್ಮ ಭಾಷಣದಲ್ಲಿ ಜಮುನಾಲಾಲರ ಅನಾರೋಗ್ಯದ ವಿಚಾರ ಪ್ರಸ್ತಾಪಿಸಿದರು. ಜಮುನಾ

ಲಾಲರು ಗೋಸೇವೆಯಲ್ಲಿ ಮಗ್ನರಾಗಿದ್ದುದರಿಂದ ಆರೋಗ್ಯದಕಡೆ ಹೆಚ್ಚು ಲಕ್ಷ್ಯಕೊಡಲಿಲ್ಲ. ಗೋಸೇವೆಯಲ್ಲಿಯೇ ತಮ್ಮ ಮುಂದಿನ ಆಯುಷ್ಯವನ್ನು ಕಳೆಯಬೇಕೆಂದು ಅವರು ನಿಶ್ಚಯಿಸಿದ್ದರು. "ಗೋಪುರಿ"ಯಲ್ಲಿ ಗೋಸೇವಾ ಸಂಘದ ಗೋಶಾಲೆಯಿದೆ. ಹುಲ್ಲು ಗುಡಿಸಲೊಂದನ್ನು ಕಟ್ಟಿ ಅಲ್ಲಿ ಜಮುನಾಲಾಲರು ಸಂನ್ಯಾಸಿಯಂತೆ ಇರತೊಡಗಿದರು.

ಆದರೆ ಈಶ್ವರೇಚ್ಛೆ ಬೇರೆಯಿತ್ತು. ಅವರ ದೇಹ ಕೃಶವಾಗಿತ್ತು. ಮಾಸಲು ಮಾಸಲಾಗಿ ಕಾಣುತ್ತಿದ್ದ ಅವರ ಗುರಿ ಈಗ ಸ್ಪಷ್ಟವಾಗಿ ಕಾಣಲಾರಂಭಿಸಿತು. ಜನನದ ಉದ್ದೇಶ ಪೂರ್ಣವಾಗಿತ್ತು. ಇನ್ನು ಗೋಪುರಿಯ ಹುಲ್ಲುಗುಡಿಸಿಲ ವಾಸವೇಕೆ? ಗೋಲೋಕದ ವಿಶಾಲ ಕ್ಷೇತ್ರದಲ್ಲೆ ಏಕೆ ವಾಸಿಸಬಾರದು?

೧೧-೨-೪೨ ನೇ ದಿನ ಜಮುನಾಲಾಲರ ಆತ್ಮ ಈ ನಶ್ವರ ಶರೀರ ಬಂಧನದಿಂದ ಬಿಡುಗಡೆಯಾಗಿ ವಿಶಾಲ ಜನಸಮುದಾಯದ ಹೃದಯ ಲೋಕವನ್ನು ಪ್ರವೇಶಿಸಿತು. ಆ ದಿನ ಫಾಲ್ಗುಣ ಕೃಷ್ಣ ಏಕಾದಶಿ ಸಾವಿಗೆ ಬಹಳ ಮಹತ್ವವಿದೆ.

ಗಾಂಧೀಜೀ ತಮ್ಮ ಐದನೆ ಮಗನನ್ನು ಕಳೆದುಕೊಂಡರು; ವಣಿಕ-ಸಮಾಜ ಒಬ್ಬ ವೈಶ್ಯ ಋಷಿಯನ್ನು ಕಳೆದುಕೊಂಡಿತು; ಕಾಂಗ್ರೆಸ್ಸಿನ ಒಂದು ಶಿಖರ ಕಳಚಿಬಿತ್ತು; ರಾಷ್ಟ್ರಕ್ಕೆ ಒಬ್ಬ ಸೇವಕ ಇಲ್ಲದಾದ. ಮುಖಂಡರಿಗೆ ಸಹೋದ್ಯೋಗಿಯೊಬ್ಬ ಕಣ್ಮರೆಯಾದಂತಾಯಿತು. ಮಿತ್ರರು ಸ್ನೇಹಿತನನ್ನು ಕಳೆದುಕೊಂಡರು. ಜಾನಕೀದೇವಿಯ ತಲೆಯ ಮೇಲಿನ ಅಭಯಹಸ್ತ ಕಳಚಿಬಿತ್ತು.

ಜಮುನಾಲಾಲರಿಗೆ ಸೋಮಾರಿತನ, ಕೋಪ ಇರಲಿಲ್ಲ; ವಿಷಾದ, ಧನಲೋಭ ಇರಲಿಲ್ಲ. ಒಳ್ಳೇ ಕಾರ್ಯತತ್ಪರರು. ಅವರ ಎದೆಯಲ್ಲಿ ಸ್ನೇಹ ಸಮುದ್ರವೆ ಇತ್ತು. ವ್ಯಾವಹಾರಿಕತೆ ತುಂಬಿ ತುಳುಕುತ್ತಿತ್ತು. ದೇಶಪ್ರೇಮ ಅವರ ಸ್ವಭಾವವೇ ಆಗಿತ್ತು. ಅತಿಥಿ ಸತ್ಕಾರದಲ್ಲಿ ಅವರಿಗೆ ಆಯಾಸವೆಂಬುದಿರಲಿಲ್ಲ. ಸ್ನೇಹ ಗಳಿಸುವುದನ್ನೂ ಉಳಿಸಿಕೊಳ್ಳುವುದನ್ನೂ ಅವರು ಚೆನ್ನಾಗಿ ಅರಿತಿದ್ದರು. ಅವರಲ್ಲಿ ವಿನಯವಿತ್ತು; ಸತ್ಯದ ಬಗೆ ಆಗ್ರಹವಿತ್ತು, ನಿರ್ಭಯವಿತ್ತು. ಜಮುನಾಲಾಲರು ಸೇಟೂ ಹೌದು, ಸಂತರೂ ಹೌದು.



ಅಂತಿಮ ದರ್ಶನ

ಫಾಲ್ಗುಣ ಕೃಷ್ಣ ಏಕಾದಶಿ ಸಾಯಂಕಾಲ. ಸೂರ್ಯಭಗವಾನನು ನಿಸ್ತೇಜನಾಗಿ ಅಸ್ತಾಚಲದ ಕಡೆ ನಿಧಾನವಾಗಿ ಹೋಗುತ್ತಿದಾನೆ. ವರ್ಧಾದಿಂದ ಗೋಪುರಿಯ ದಿಣ್ಣೆಯಕಡೆ ದೊಡ್ಡ ಮೆರವಣಿಗೆಯೊಂದು ಮಹಿಳಾಶ್ರಮದ ದಾರಿಯಲ್ಲಿ ಹೋಗುತ್ತಿದೆ. ಜನರ ಮುಖದಮೇಲೆ ವಿಷಾದ ಕವಿದಿದೆ; ಆದರೂ ಗಾಂಭೀರ್ಯ ಕಡಮೆಯಾಗಿಲ್ಲ. ಮೆರವಣಿಗೆಯ ಜನ ತಮ್ಮ ವಿಷಾದವನ್ನು ಮರೆಯಲು ದೊಡ್ಡ ಧ್ವನಿಯಿಂದ "ಸೇಟ್ ಜಮನಾಲಾಲಕಿ ಜೈ" "ಮಹಾತ್ಮಾಗಾಂಧೀಕಿ ಜೈ" "ವಂದೇ ಮಾತರಂ" ಎಂದು ಕೂಗುತ್ತಿದಾರೆ.

ಏನು ಈ ಜಯಘೋಷ? ಮೃತ್ಯುವನ್ನು ಹೀಯಾಳಿಸಿ ತಮ್ಮ ರೋಷವನ್ನು ಪ್ರಕಟಿಸಿ ಹೃದಯದೊಳಗಿನ ವಿಷವನ್ನು ಕಾರುತ್ತಿದ್ದರೆ ಜನ? ಉಕ್ಕಿ ಹರಿಯುತ್ತಿದ್ದ ಉದ್ವೇಗ ಪರಿವರ್ತನವಾಗಿ ಈ ರೂಪವೋ? ಅಥವಾ ಜಮನಾಲಾಲರ ಬಂಧು ಮಿತ್ರ ಸ್ವಜನರನ್ನು ಅವರ ಕಾರ್ಯ ಕ್ಷೇತ್ರದ ಕಡೆ ಕರೆಯುವ ಸ್ವಾಗತ ಮಂತ್ರವೋ? ಇಂಥದೇ ಯಾವುದೋ ಇರಬೇಕು. ಏಕೆಂದರೆ ಈ ಕೂಗು ಜಮನಾಲಾಲರ ಆಪ್ತ ಸಂಬಂಧಿಗಳ, ಮಿತ್ರರ ಹೃದಯಾಂತರಾಳವನ್ನು ಹೊಕ್ಕು ಅವರು ಗೈದ ಅಪೂರ್ಣ ಕಾರ್ಯ ಪೂರೈಸುವ ಹೊಣೆ ಹೊರುವಂತೆ ಹುರಿದುಂಬಿಸುತ್ತಿತ್ತು.

ಮೆರವಣಿಗೆಯಲ್ಲಿ, ಅನೇಕರ ಹೆಗಲಮೇಲೆ ಜಮನಾಲಾಲರು ನಿದ್ರಿಸುತ್ತಿದ್ದರು. ಅವರ ಶರೀರ ಸ್ತಬ್ಧವಾಗಿತ್ತು. ಗಾಂಧೀಜೀ ಹೊದೆಯುವ ಅಂಗವಸ್ತ್ರವನ್ನು ಹೆಣದಮೇಲೆ ಹೊದಿಸಿದ್ದರು. ಮುಖ ಮಾತ್ರ ತೆರೆದಿತ್ತು. ಕಣ್ಣು ಮುಚ್ಚಿದ್ದವು. ಕೆಲವರು ಅಳುತ್ತಿದ್ದರು. ಕೆಲವರು ಜಯಧ್ವನಿ ಮಾಡುತ್ತಿದ್ದರು. ಜಮನಾಲಾಲರು ನಿರ್ಲಿಪ್ತರಾಗಿ—ವಿರಕ್ತರಾಗಿ—ನಿದ್ರಿಸುತ್ತಿದ್ದರು.

ಮೆರವಣಿಗೆ ಮುಂದುವರಿಯಿತು. ಕಾಂಗ್ರೆಸ್ ಸ್ವಯಂಸೇವಕರು ತ್ರಿವರ್ಣ ಧ್ವಜಹಿಡಿದು ಒಬ್ಬರಪಕ್ಕದಲ್ಲೊಬ್ಬರು ಎದೆ ನೀಡಿ ವೇಗವಾಗಿ ನಡೆಯುತ್ತಿದ್ದರು. "ವಂದೇ ಮಾತರಂ" ಧ್ವನಿ ನಭೋಮಂಡಲವನ್ನು

ಭೇದಿಸಲಾರಂಭಿಸಿತು. ಅದಕ್ಕೆ ಉತ್ತರವಾಗಿ ಹೆಂಗಸರ ಗುಂಪಿನವರು "ರಾಮ ಧುಣ್ ಲಾಗೀ, ಗೋಪಾಲ ಧುಣ್ ಲಾಗೀ" ಎಂಬ ಕೂಗಿನಿಂದ ಮುಗಿಲನ್ನು ಮೊಳಗಿಸಿದರು. ಗೋಪುರಿಯ ತಿಟ್ಟೂ ಕಾಡೂ ಮಾರು ಮೊಳಗಿಸಿದವು. ಒಂದೆಡೆ "ವಂದೇ ಮಾತರಂ"; ಇನ್ನೊಂದೆಡೆ ವಿಷಾದ ಭಕ್ತಿಭಾವದ "ರಾಮಧುಣ್"; ಮತ್ತೊಂದೆಡೆ ಅರಣ್ಯದ ಪ್ರತಿಧ್ವನಿ; ಈ ಮೂರೂ ಧ್ವನಿಗಳೂ ಪರಸ್ಪರ ಬೆರೆತು ಸಮರಸವಾಗುತ್ತಿದ್ದವು—ಮಳೆ ಹನಿಯ ಸಂಗೀತ, ಗುಡುಗಿನ ಧ್ವನಿಯೊಡನೆ ಸೇರಿ ಸಮರಸವಾಗುವಂತೆ.

ಜನರ ಗದ್ಗದ ಕಂಠದಿಂದ ಹೊರಬೀಳುತ್ತಿದ್ದ ನಾದ ಧ್ವನಿ ಪ್ರತಿಧ್ವನಿ ಇವೆಲ್ಲಕ್ಕೂ ಒಂದು ವಿಶಿಷ್ಟ ರೂಪ ಬಂದಿತ್ತು. ಈ ವಿಶಿಷ್ಟ ರೂಪ ಪ್ರಳಯಕಾಲದವರೆಗೂ ಉಳಿದಿರಲಿ; ಸೃಷ್ಟಿಯ ಯಾವ ವಸ್ತುವೂ ಸಂಪೂರ್ಣ ನಾಶವಾಗದು. ಮನುಷ್ಯನ ಇಂದ್ರಿಯಗಳ ಗ್ರಹಣಶಕ್ತಿ ಸೀಮಾಬದ್ಧವಾದುದು; ಆದ್ದರಿಂದ ಅವನ ಕಿವಿಗಳಿಗೆ ಮಿಶ್ರಿತ ಕೋಲಾಹಲವೇ ಕೇಳಿಬರುತಿತ್ತು. ಅದರಲ್ಲಿ ಜಯನಾದವೂ ಇತ್ತು, ಆರ್ತ ನಾದವೂ ಇತ್ತು.

ಮೆರವಣಿಗೆ ಮುಂಬರಿಯಿತು. ಎಲ್ಲರ ಕಾಲೂ ಗೋಪುರಿಯ ಕಡೆ ಹಕ್ಕಿಯಂತೆ ಹಾರುತ್ತಿದ್ದವು. ಎಲ್ಲರೂ ಜಮುನಾಲಾಲರ ಧ್ಯಾನದಲ್ಲಿ ಮಗ್ನರಾಗಿದ್ದರು.

ಜಮುನಾಲಾಲರಿಗೆ ಇದುವರೆಗೆ ಎಷ್ಟು ಮೆರವಣಿಗೆಯಾಗಿದೆಯೋ ಯಾರು ಬಲ್ಲರು! ಆದರೆ ಇದು ಅವೆಲ್ಲಕ್ಕಿಂತ ವಿಚಿತ್ರವಾದುದು. ಆ ಮೆರವಣಿಗೆಗಳಲ್ಲಿ ಮೋಟರ್‌ನಲ್ಲೋ ಎತ್ತಿನಗಾಡಿಯಲ್ಲೋ ಕುಳಿತಿರುತ್ತಿದ್ದರು. ಜನ ಅವರಿಗೆ ನಮಸ್ಕರಿಸುತ್ತಿದ್ದರು. ಜಮುನಾಲಾಲರೂ ಪ್ರತ್ಯುತ್ತರವೆಂದು ಅಭಿವಾದನ ಮಾಡುತ್ತಿದ್ದರು. ಪ್ರೇಕ್ಷಕರಲ್ಲಿ ಕೆಲವರು ಹಿತೈಷಿಗಳಾದರೆ, ಕೆಲವರು ದ್ವೇಷಿಗಳು. ತಮ್ಮ ಇಣಿಕು ನೋಟದಲ್ಲಿ ಮಗ್ನರಾದ ಪೋಲೀಸರೂ ಇರುತ್ತಿದ್ದರು. ಈ ಮೆರವಣಿಗೆಗೂ ಅವುಗಳಿಗೂ ಪೂರ್ಣ ವ್ಯತ್ಯಾಸ.

ಇದರಲ್ಲಿ ಜಮುನಾಲಾಲರು ಈಶ್ವರನಲ್ಲಿ ಸಮಾಧಿಸ್ಥರು; ಜನರು ಜಮುನಾಲಾಲರಲ್ಲಿ ಧ್ಯಾನಾವಸ್ಥಿತರು. ಪೋಲೀಸರಿದ್ದರೂ ಕೋಪ

ಗೊಂಡಿಲ್ಲ. ದುಃಖಿತರು. ನಮುಸ್ಕಾರಮಾಡುವವರಿಲ್ಲ; ಪ್ರತ್ಯುತ್ತರ ಕೊಡುವವರಿಲ್ಲ. ಆದರೆ "ಜಮುನಾಲಾಲಕೀ ಜೈ" "ವಂದೇ ಮಾತರಂ" ಘೋಷಮಾತ್ರ ಎಂದಿನಂತೆಯೆ. ಗುಂಪಿನಲ್ಲಿ ಮಹಾತ್ಮಾಗಾಂಧೀಜಿಯೂ ಇದಾರೆ.

ಮೆರವಣಿಗೆ ಗೋಪುರಿಯ ದಿಣ್ಣೆಯಮೇಲೆ ಹೋಯಿತು. ಜಮುನಾಲಾಲರು ಜನರ ಹೆಗಲಿನಿಂದ ಕೆಳಗಿಳಿದರು. ಅನೇಕ ಲಕ್ಷ ಜನ ಆ ನಶ್ವರ ಶರೀರದ ಅಂತಿಮದರ್ಶನಮಾಡಿಕೊಂಡರು. ಜನರ ಗುಂಪು ಚಿತೆಯ ಸುತ್ತಲೂ ಮುತ್ತಿಕೊಂಡಿತು.

ಚಿತೆಗೆ ಬೆಂಕಿಯಿಟ್ಟರು. ಧಗ್ಗೆಂದು ಹತ್ತಿತು. ಸೂರ್ಯ ಅಸ್ತಾಚಲದಲ್ಲಿ ಮುಳುಗುತ್ತಿದ್ದ. ಚಿತೆಯ ಜ್ವಾಲೆ ಹೆಚ್ಚಾದಂತೆ ಸೂರ್ಯ ಖಿನ್ನನಾಗಿ ಅಂತರ್ಧಾನನಾದ.

ಕೃಷ್ಣ ಏಕಾದಶಿಯ ರಾತ್ರಿಯ ಸ್ವಚ್ಛ ನೀಲಾಕಾಶದಲ್ಲಿ ನಕ್ಷತ್ರಗಳ ಅಗಣಿತ ಸೇನೆ ಚಿತೆಯ ಕಡೆ ರೆಪ್ಪೆ ಹೊಡೆಯದೆ ನೋಡುತ್ತಿತ್ತು. ಜಮುನಾಲಾಲರನ್ನು ಸ್ವಾಗತಿಸಲು ಅವು ಸಿದ್ಧವಾಗಿದ್ದವೇನು? ಕೆಲವು ನಕ್ಷತ್ರ ಮಿನುಮಿನುಗಿ ಸಂದೇಶ ಕಳಿಸುತ್ತಿದ್ದವು. ಕೆಲವು ಶಾಂತವಾಗಿದ್ದವು. ಕೃತ್ತಿಕೆ ಮೆಲ್ಲಮೆಲ್ಲನೆ ತನ್ನ ನಿರ್ದಿಷ್ಟಮಾರ್ಗದಲ್ಲಿ ಬಾಣದಿಂದ ನೊಂದ ಮೃಗ ಹೋಗುತ್ತಿದೆ. ಹಿಂದೆ ಹಿಂದೆ ಓಡುತ್ತಿದೆ. ವ್ಯಾಧನು ಅವ್ಯಗ್ರವಾಗಿ ಬಹುವೇಗವಾಗಿ ಮೃಗಶಿರದ ಹಿಂದೆ ನಿತ್ಯದಂತೆ ಚಲಿಸುತ್ತಿದ್ದಾನೆ. ನಾವು ಯಾವ ಘಟನೆಯಲ್ಲಿ ಇಷ್ಟು ಮಗ್ನರಾಗಿದ್ದೇವೆಯೋ ಅದನ್ನು ಈ ನಕ್ಷತ್ರಗಳು ಲಕ್ಷಿಸಿಯೇ ಇಲ್ಲ. ತಮ್ಮ ತಮ್ಮ ನಿರ್ದಿಷ್ಟ ಕಾರ್ಯದಲ್ಲಿ ಅವು ನಿರತವಾಗಿವೆ.

ನಾನು ಮನಸ್ಸಿನಲ್ಲಿಯೇ ವ್ಯಾಧನನ್ನು ನೋಡುತ್ತಾ ಅಂದುಕೊಂಡೆ "ಈ ನಕ್ಷತ್ರಗಳು ಅದ್ಭುತವಾಗಿವೆ. ನಿತ್ಯವೂ ಲಕ್ಷಾಂತರ ಜನ ಹುಟ್ಟುತ್ತಾರೆ, ಸಾಯುತ್ತಾರೆ. ಪಾಪ-ಪುಣ್ಯಗಳಾಗುತ್ತವೆ. ಹಾನಿ-ಲಾಭಗಳಾಗುತ್ತವೆ. ಕೆಲವರು ಅತ್ತರೆ ಕೆಲವರು ನಗುತ್ತಾರೆ. ಒಂದೆಡೆ ಸುಖವಾದರೆ ಇನ್ನೊಂದೆಡೆ ದುಃಖ. ಈ ನಕ್ಷತ್ರಗಳ ಮೇಲೆ ಇದರಿಂದ

ಸ್ವಲ್ಪವೂ ಪರಿಣಾಮವಾಗದು. ರಾತ್ರಿ-ಹಗಲು ಒಂದು ಕ್ಷಣವೂ ಇವು ತಮ್ಮ ಕೆಲಸ ಬಿಟ್ಟು ವಿರಮಿಸುವುದಿಲ್ಲ."

ವ್ಯಾಧ ಮಿನುಗಿದ. ಈರೀತಿ ಹೇಳುತ್ತಿದ್ದಂತೆ ಭಾಸವಾಯಿತು. "ಕೇಳು ಒಬ್ಬ ರಾಜನಿದ್ದ. ಅವನ ಹೆಸರು ಮರುತ. ಅವನು ದೇವೇಂದ್ರ ನನ್ನು ಸೋಲಿಸಿದ್ದ. ಅವನ ರಾಜ್ಯದಲ್ಲಿ ಉಳದೆ ಬಿತ್ತದೆ ಭೂಮಿ ಯಲ್ಲಿ ಬೆಳೆಯಾಗುತ್ತಿತ್ತು. ಧರ್ಮ ವೈರಾಗ್ಯ ಐಶ್ವರ್ಯಗಳಲ್ಲಿ ಆತ ಬಹಳ ಹೆಸರುವಾಸಿಯಾಗಿದ್ದ. ಅವನ ಜೀವನ ಮರಣ ಎರಡನ್ನೂ ನಾವು ನೋಡಿದೆವು.

ಸುಹೋತ್ರನೆಂಬ ಒಬ್ಬ ರಾಜನಿದ್ದ. ಅವನ ರಾಜ್ಯದಲ್ಲಿ ಬೇಕಾ ದಷ್ಟು ಮಳೆಯಾಗುತ್ತಿತ್ತು ; ಚಿನ್ನದ ಹೊಗೆ ಹೊರಡುತ್ತಿತ್ತು. ವೈರಾಗ್ಯ ಜ್ಞಾನ ಐಶ್ವರ್ಯದಲ್ಲಿ ಅವನು ಪ್ರಖ್ಯಾತ. ಕಡೆಗೆ ಅವನೂ ಸತ್ತ. ಅವನ ಜೀವಮರಣಗಳೆರಡನ್ನೂ ನಾವು ಕಂಡೆವು.

ಶಿಬಿ ಎಂಬ ರಾಜನಿದ್ದ. ಅವನ ಯಶಸ್ಸು ಧರ್ಮ ಮತ್ತು ಐಶ್ವರ್ಯಕ್ಕೆ ಹೋಲಿಕೆ ಇರಲಿಲ್ಲ. ಅವನು ಗಂಗಾ ಯಮುನಾ ಸರಸ್ವತಿ ತೀರಗಳಲ್ಲಿ ಸಾವಿರ ಅಶ್ವಮೇಧ ಮತ್ತು ಮೂರು ರಾಜಸೂಯಯಾಗ ಮಾಡಿದ. ದೊಡ್ಡ ತಪಸ್ವಿಯವನು. ಅವನೂ ಕಣ್ಮರೆಯಾದ. ಅವನ ಹುಟ್ಟು ಸಾವುಗಳೆರಡನ್ನೂ ನಾವು ಬಲ್ಲೆವು.

ದಶರಥ ಕುಮಾರ ರಾಮನಿದ್ದ. ಅವನ ರಾಜ್ಯದಲ್ಲಿ ಎಲ್ಲಾ ಪ್ರಾಣಿಗಳೂ ಸಾವಿರ ವರ್ಷ ಬದುಕುತ್ತಿದ್ದುವು. ಒಬ್ಬರಿಗೂ ರೋಗವಿರ ಲಿಲ್ಲ. ಎಲ್ಲರೂ ಧರ್ಮಿಷ್ಠರಾಗಿದ್ದರು. ತೃಪ್ತರಾಗಿದ್ದರು. ಸತ್ಯನಿಷ್ಠರಾಗಿ ನಿರ್ಭಯರಾಗಿದ್ದರು.

**ಸಂತುಷ್ಟಾಃ ಸರ್ವಸಿದ್ಧಾರ್ಥಾಃ ನಿರ್ಭಯಾಃ ಸ್ವೈರಚಾರಿಣಃ**
**ನರಾಃ ಸತ್ಯವ್ರತಾಶ್ಚಾಸನ್ ರಾಮೇ ರಾಜ್ಯಂ ಪ್ರಶಾಸತಿ.**

ಆ ರಾಮನೂ ಸ್ವರ್ಗಸ್ಥನಾದ. ನಾವು ಅವನ ಹುಟ್ಟು-ಸಾವು ಗಳನ್ನು ಕಂಡೆವು.

ಭಗೀರಥನಿದ್ದ. ಗಂಗೆಯ ತಂದೆ ಎನ್ನುತ್ತಾರೆ. ಭೂಲೋಕಕ್ಕೆ ಗಂಗೆಯನ್ನು ತಂದವನವನು. ಅವನೂ ಇಲ್ಲಿ ಉಳಿಯಲಿಲ್ಲ.



ಬಾಪೂ ಸಂಗಡ ಸಂಭಾಷಣೆ

ದಿಲೀಪ ರಾಜ ಬಂದ. ಅವನ ದರ್ಶನ ಮಾತ್ರದಿಂದ ಜನ ಪವಿತ್ರ ರಾಗುತ್ತಿದ್ದರು. ಆದರೂ ಸತ್ತ.

ಮಾಂಧಾತ ರಾಜ ಹುಟ್ಟಿದ. ಅವನ ರಾಜ್ಯ ಬಹು ದೊಡ್ಡದು. ಸೂರ್ಯಪ್ರಕಾಶಕ್ಕೆ ಒಳಗಾದ ಭೂಮಂಡಲವೆಲ್ಲಾ ಅವನ ಅಧೀನ. ಆದುದರಿಂದ ಪೃಥ್ವಿಗೆ "ಮಾಂಧಾತ ಕ್ಷೇತ್ರ" ವೆಂದು ಹೆಸರಾಯಿತು. ಅವನೂ ಬಂದ-ಹೋದ. ನಾವು ಅವನ ಜನನ-ಮರಣಗಳೆರಡನ್ನೂ ನೋಡಿದೆವು.

ನಹುಷಪುತ್ರ ಯಯಾತಿ ಇದ್ದ. ಐಶ್ವರ್ಯಶಾಲಿ, ವಿದ್ವತ್ಪಕ್ಷಪಾತಿ. ಆದರೂ ಅವನೂ ಸತ್ತ.

ಅಂಬರೀಷ ರಾಜನಿದ್ದ. ಅವನ ಅಧೀನದಲ್ಲಿ ಸಣ್ಣ ಪುಟ್ಟ ೧೦೦೦ ರಾಜರಿದ್ದರು. ವಿದ್ವಾಂಸರ ಸೇವೆ ಮಾಡುತ್ತಿದ್ದ. ಕಡೆಗೆ ಮೃತನಾದ.

ಗಯನಿದ್ದ. ಪರೋಪಕಾರಪರಾಯಣ. ಉಂಛವೃತ್ತಿಯಿಂದ ಜೀವಿಸುತ್ತಿದ್ದ. ಅಗ್ನಿ ದೇವರು ಧರ್ಮ ಸತ್ಯಗಳಲ್ಲಿ ಶ್ರದ್ಧೆಯಿರುವಂತೆ ವರ ಕೊಡ ಬಯಸಿದ. ಪರೋಪಕಾರ ಸಾಧನೆ ಅಕ್ಷಯವಾಗುವಂತೆ ವರ ಬೇಡಿದ.

ಜಗದ್ವಿಖ್ಯಾತ ಪರೋಪಕಾರಿ ರಂತಿದೇವನಿದ್ದ. ಅವನೂ ಮೃತನಾದ.

ಸಗರ ಚಕ್ರವರ್ತಿಯಿದ್ದ. ಅವನ ರಾಜ್ಯದಲ್ಲಿ ಭೂಮಿ ಬೇಡದೆಯೆ ಧಾನ್ಯ ಕೊಡುತ್ತಿತ್ತು. ಮರದ ಪ್ರತಿಯೊಂದು ಎಲೆಯಿಂದಲೂ ಜೇನು ತೊಟ್ಟುತ್ತಿತ್ತು. ಹಸು ಕೊಡತುಂಬ ಹಾಲು ಕರೆಯುತ್ತಿತ್ತು. ಅವನೂ ಕಣ್ಮರೆಯಾದ.

ಧೃವಕುಮಾರನ ಜನನವಾಯಿತು; ಅವನು ಉಗ್ರ ತಪಸ್ಸಿನಿಂದ ವಿಷ್ಣುವನ್ನು ಪ್ರತ್ಯಕ್ಷ ಮಾಡಿಕೊಂಡ.

ಪ್ರಹ್ಲಾದ ಹುಟ್ಟಿದ; ಅನೇಕ ಬಗೆಯ ಕಷ್ಟ ಸಹಿಸಿದ, ಆದರೆ ಭಗವದ್ಭಕ್ತಿ ಬಿಡಲಿಲ್ಲ.

ಬಲಿ ತನ್ನ ದಾನ ಪದ್ಧತಿ ಬಿಡಲಿಲ್ಲ; ಮಣ್ಣುಪಾಲಾದ.

ಹರಿಶ್ಚಂದ್ರ ಪ್ರತಿಜ್ಞಾ ಪಾಲನೆಗಾಗಿ ಸರ್ವ ನಾಶಮಾಡಿಕೊಂಡ.

ಕೃಷ್ಣಾವತಾರವಾಗಿ ಭೂಭಾರ ಇಳಿಯಿತು.

ಭೌದ್ಧಾವತಾರವಾಯಿತು. ಧರ್ಮದ ಹೆಸರಿನಲ್ಲಿ ಕೊಲೆಯಾಗುತ್ತಿದ್ದ ಸಾವಿರಾರು ಮೂಕಪ್ರಾಣಿಗಳ ವಧೆ ನಿಂತಿತು. ಅರ್ಧಕ್ಕಿಂತ ಹೆಚ್ಚು ಭೂಭಾಗದ ಮನೋವೃತ್ತಿ ಅಹಿಂಸಾಮಯವಾಯಿತು.

ನಾವು ಈ ದಿಗ್ಗಜಗಳ, ಮಹಾಪುರುಷರ ಜೀವನ ನೋಡಿದೆವು; ಮೃತ್ಯುವನ್ನೂ ಕಂಡೆವು. ಇವರೆಲ್ಲರೂ ಕಡೆಗೆ ಚಿತೆಯ ಮೇಲೆ ನಿದ್ರಿಸಬೇಕಾಗಿ ಬಂತು. ಅವರ ನಶ್ವರ ಶರೀರ ಕೊನೆಗೆ ಅಗ್ನಿದೇವನಿಗೆ ಶರಣಾಯಿತು. ಜನ ದುಃಖಪಟ್ಟರು. ದುಃಖದಿಂದ ವಿಹ್ವಲರಾದರು. ಆದರೆ ನಾವು ಒಂದು ಕ್ಷಣವೂ ನಮ್ಮ ಕೆಲಸ ನಿಲ್ಲಿಸಲಿಲ್ಲ. ಏಕೆ ನಿಲ್ಲಿಸೋಣ? ಏಕೆ ದುಃಖಿಸೋಣ?

**ನಾಯಮತ್ಯಂತ ಸಂವಾಸೋ ಲಭ್ಯತೇ ಜಾತು ಕೇನಚಿತ್**
**ಅಪಿ ಸ್ವೇನ ಶರೀರೇಣ ಕಿಮುತಾನ್ಯೇನ ಕೇನಚಿತ್**

ಈ ಪ್ರಪಂಚದಲ್ಲಿ ಯಾರೂ ಒಟ್ಟಿಗೆ ದೀರ್ಘಕಾಲ ಬದುಕಲಾರರು. ನಮ್ಮ ಶರೀರವೇ ಚಿರಕಾಲ ನಮ್ಮ ಜೊತೆಯಲ್ಲಿ ಇಲ್ಲದಿರುವಾಗ ಇತರರು ನಮ್ಮೊಂದಿಗೆ ಇರಬಲ್ಲರೇ? ಆದ್ದರಿಂದ ನಾವು ನಮ್ಮ ಕೆಲಸ ಮಾಡುತ್ತೇವೆ; ನೀವು ನಿಮ್ಮ ಕೆಲಸ ಮಾಡಿ" ಹೀಗೆಂದು ನಕ್ಷತ್ರಗಳು ಹೇಳುತ್ತಿದ್ದಂತೆ ಭಾಸವಾಗುತ್ತಿತ್ತು.

ಅಗ್ನಿದೇವ ತನ್ನ ನಾಲಗೆಯನ್ನು ಚಿತೆಯಮೇಲೆ ಪ್ರಸರಿಸಲಾರಂಭಿಸಿದ. ನಾಲ್ಕೂಕಡೆ ನೆರದಿದ್ದ ಜನರಮುಖ ಚಿತೆಯ ಜ್ವಾಲೆಯಿಂದ ಮಿನುಗಿತು. ಮಧ್ಯೆ ಹವನಕುಂಡ, ಸುತ್ತ ದರ್ಶಕ ಗಣ. ಎಲ್ಲರೂ ಜಮನಾಲಾಲರ ಅಂತ್ಯಯಜ್ಞದಲ್ಲಿ ಆಹುತಿ ಕೊಡುತ್ತಿದಾರೆ. ಯಾರೂ ಅಳುತ್ತಿರಲಿಲ್ಲ. ಅಳು ಬಂದಷ್ಟೂ ಜೋರಾಗಿ "ರಾಮಧುನ್‌ಲಾಗಿ ಗೋಪಾಲಧುನ್‌ಲಾಗಿ" ಎಂದು ಗಗನಭೇದಕ ಧ್ವನಿಯಿಂದ ಕೂಗುತ್ತಿದ್ದರು. ದುಃಖಮರೆಸಲು ಇದೂ ಒಂದು ರೀತಿ.

ಕುಮಾರಿ ಅಮತುಸ್ಸಲಾಮ್ ಕೊರ್ರಾ ತೆಗೆದುಕೊಂಡು ಮುಂದೆ ಬಂದರು. ಫಾತೆಹಾ ಪಠಿಸಿದರು. ಅದು ಮುಗಿದನಂತರ ವಿನೋಬಾ ವೇದಪಾರಾಯಣ ಮಾಡಿದರು.

ಚಿತೆಯ ತಾಪ ಅಸಹನೀಯವಾಗುತ್ತ ಬಂತು. ಜಮುನಾಲಾಲರ ಅಂತಿಮ ಯಜ್ಞದ ದರ್ಶನಲಾಭ ಕಳೆದುಕೊಳ್ಳಲು ಯಾರೂ ಸಿದ್ಧರಿರಲಿಲ್ಲ. ವೇದಪಾರಾಯಣ ಮುಗಿಯಿತು. ಗೀತೆಯ ನವಮೋಧ್ಯಾಯವನ್ನು ವಿನೋಬಾ ಪ್ರಾರಂಭಿಸಿದರು, ಅದೂ ಮುಗಿಯಿತು.

"ವಿನೋಬಾ ! ವೇದ ಗೀತಾ ಪಾರಾಯಣದಿಂದ ನಾನು ಮುಗ್ಧನಾದೆ ; ಕೇಳಬೇಕೆಂಬ ಲೋಭ ಉಳಿಯಲಿಲ್ಲ ; ತುಕಾರಾಮರ ಅಭಂಗವನ್ನು ಹಾಡು" ಎಂದರು ಗಾಂಧೀಜೀ.

ಅಭಂಗ ಮೊದಲಾಯಿತು. ಎಲ್ಲರೂ ಈಶ್ವರ ಧ್ಯಾನದಲ್ಲಿ ತಲ್ಲೀನರಾಗಿದ್ದರು. ಇದು ಸ್ಮಶಾನವೋ ಅಗ್ನಿ ಹೋತ್ರವೋ? ಬಲ್ಲವರಾರು? ಎಲ್ಲರೂ ಎಚ್ಚರತಪ್ಪಿ ಬೊಂಬೆಯಂತೆ ನಿಂತಿದ್ದರು. ಹರಿಭಜನೆಯಲ್ಲಿ ಮಗ್ನರಾಗಿದ್ದರು. ಸಂತಾಪ, ವಿಷಾದ, ವಿಲಾಪಗಳಿರಲಿಲ್ಲ. ಭಕ್ತಿರಸ ಕಣ್ಣಿನಿಂದ ಧಾರಾವಾಹಿಯಾಗಿ ತೊಟ್ಟುತ್ತಿತ್ತು.

ಗುಂಪಿನ ಮಧ್ಯದಿಂದ ಪುರೋಹಿತ ಶಾಸ್ತ್ರಿಗಳು ಕೈಯಲ್ಲಿ ವೇದದ ಪುಸ್ತಕ ಹಿಡಿದು ಚಿತೆಯಕಡೆ ನುಗ್ಗಿದರು. ಒಂದು ಕೈಯಲ್ಲಿ ಊರುಗೋಲು, ಇನ್ನೊಂದರಲ್ಲಿ ವೇದ ಪುಸ್ತಕ, ಮೈಮೇಲೆ ಲಂಗೋಟಿ ಮಾತ್ರ ; ಉಳಿದಭಾಗವೆಲ್ಲಾ ಬರೀ ಮೈ. ಚಿತೆಯಕಡೆ ಮುಖವಾಗಿದ್ದ ಶಾಸ್ತ್ರಿಗಳ ಶರೀರ ಜ್ವಾಲೆಯಿಂದ ಹೊಳೆಯುತ್ತಿತ್ತು ; ಆದರೆ ಹಿಂಭಾಗದಲ್ಲಿ ಕತ್ತಲು. ಚಿತೆಯ ಬೆಂಕಿಯ ಕಿರಣಗಳು ಶಾಸ್ತ್ರಿಗಳ ಮೈಗೆ ತಗುಲಿ ಪುನಃ ಚಿತೆಯನ್ನೇ ಹೋಗಿ ಸೇರುತ್ತಿದ್ದವು. ನಾಲ್ಕೂ ಕಡೆ ನೀರವ. ಚಿತೆ ತನ್ನ ಕೆಲಸ ತಾನು ಮಾಡುತ್ತಿತ್ತು. ಜಮುನಾಲಾಲರ ಜೀವನ ಮಂದವಾಗಿರಲಿಲ್ಲ ; ಅದರಂತೆಯೇ ಅವರ ಚಿತಾಗ್ನಿ ಸಹ ಮಂಕಾಗಿರಲಿಲ್ಲ. ವೇಗ ವೇಗವಾಗಿ ಅಗ್ನಿದೇವನ ಅಲೆ ಆಕಾಶಕ್ಕೆ ಹಾರಲಾರಂಭಿಸಿತು. ಜ್ವಾಲೆಯಿಂದ ಹೊರಟ ಕಿಡಿಗಳು ವಾಯುಮಂಡಲದಲ್ಲಿ ಹರಡಿದವು. ಕಿಡಿಗಳು ಕೆಲವು ಕುಣಿಯುತ್ತಿದ್ದವು, ಕೆಲವು ಹೊಳೆಯುತ್ತಿದ್ದವು, ಕೆಲವು ಹಾರುತ್ತಿದ್ದವು.

ಶಾಸ್ತ್ರಿಗಳು ಈ ರೀತಿ ಪಠಿಸಿದರು—

**"ಸತ್ಯಮುಗ್ರಸ್ಯ ಬೃಹತಃ ಸಂಸ್ರವಂತಿ ಸಂಸ್ರವಾಃ
ಸಂಯಂತಿ ರಸಿನೋ ರಸಾಃ ಪುನಾನೋ ಬ್ರಹ್ಮಣಾ
ಹರ ಇಂದ್ರಾಯೇನ್ದೋ ಪರಿಸ್ರವಃ"**

"ಸತ್ಯಮಯ ಸರ್ವಶಕ್ತ ಭಗವಂತನ ನಾನಾ ಐಶ್ವರ್ಯ ಇಲ್ಲಿ ಹರಿಯುತ್ತಿದೆ. ಆ ಆನಂದ ಧನದ ರಸ ಉಕ್ಕುತ್ತಿದೆ. ಎಲೈ ಜೀವವೇ ನೀನು ಆ ಪ್ರಭುವನ್ನು ಸೇರಲು ಮುಂದೆ ನಡೆ."

**"ಯತ್ರ ಜ್ಯೋತಿರಜಸ್ರಂ ಯಸ್ಮಿಁಲೋಕೇ ಸ್ವರ್ಹಿತಮ್
ತಸ್ಮಿನ್ಮಾಂ ದೇಹಿ ಪವಮಾನಾಮೃತೇ ಲೋಕೇ ಅಕ್ಷಿತ
ಇಂದ್ರಾಯೇನ್ದೋ ಪರಿಸ್ರವಃ"**

"ಹೇ ಪರಮಪಾವನ ಪ್ರಭೋ! ಸದಾಪ್ರಕಾಶವಿರುವ, ಸುಖವಿರುವ ಅಮೃತ, ಅಕ್ಷಯ ಲೋಕದಲ್ಲಿ ನನ್ನನ್ನು ಇರಿಸು. ಎಲೈ ಜೀವವೇ ನೀನು ಆ ಶ್ರೀಮಂತ ಪ್ರಭುವನ್ನು ಸೇರಲು ಮುಂದೆ ನಡೆ."

ಜಮನಾಲಾಲರು ಇದನ್ನು ಕೇಳುತ್ತಿದ್ದರೇ? ನಡೆಯುತ್ತಿದ್ದುದನ್ನು ನೋಡುತ್ತಿದ್ದರೇ? ಖಂಡಿತವಾಗಿಯೂ. ಏಕೆಂದರೆ ಜಮನಾಲಾಲರ ಪುನರ್ಜನ್ಮವಾಗಿತ್ತು. ತಮ್ಮ ಮಿತ್ರರ ಹೃದಯದಲ್ಲಿ ಮನೆ ಮಾಡಿಕೊಂಡಿದ್ದರು. ಜಮನಾಲಾಲರ ದೋಷ, ಪಾಪ, ಅಶಕ್ತತೆಯೆಲ್ಲ ಚಿತೆಯಲ್ಲಿ ಸ್ವಾಹಾ ಆಗಿತ್ತು. ಜಮನಾಲಾಲರ ಉಜ್ವಲ ಸ್ವಚ್ಛ ಗುಣ ಮಾತ್ರ ಚಿತೆಯಿಂದೆದ್ದು ಅವರ ಮಿತ್ರರ ಹೃದಯವನ್ನು ಪ್ರವೇಶಿಸಿತ್ತು. ಜಮನಾಲಾಲರಿಗೆ ಹೊಸ ಶರೀರ ಬಂತು. ಅವರ ಪುನರ್ಜನ್ಮವಾಯಿತು. "ಎಲೈ ಜೀವವೇ, ನಡೆ ಮುಂದೆ" ಎಂದು ಶಾಸ್ತ್ರಿಗಳು ಹೇಳಿದಾಗ ಸಮಸ್ತ ಪ್ರಜೆ, ಸ್ವಜನ, ಮಿತ್ರರನ್ನೂ ಉದ್ದೇಶಿಸಿ ಹೇಳುತ್ತಿದ್ದರು.

ಚಿತೆ ಉರಿಯುತ್ತಲೇ ಇತ್ತು. ಒಂದುಕಡೆ ಕಟ್ಟಿಗೆ ಜಾರಿತು. ಜಮನಾಲಾಲರ ತಲೆ ಕಾಣಿಸಿತು. ಜಮನಾಲಾಲರು ಪ್ರಾಯಶಃ ತಮ್ಮ ಕಡೆಯ ದರ್ಶನ ಕೊಡುತ್ತಿದ್ದರೇನೊ. ಸಂಕೇತದಿಂದ ಹೇಳುತ್ತಿದ್ದರೇನೋ!

**ಮಾತರ್ಮೇದಿನಿ, ತಾತ ಮರುತ, ಸಖೇತೇಜಃ, ಸುಬನ್ಧೋಜಲ, ಭ್ರಾತರ್ವ್ಯೋಮ, ನಿಬದ್ಧ ಏವ ಭವತಾಮೇಷ ಪ್ರಣಾಮಾಂಜಲಿಃ ಯುಷ್ಮತ್ಸಂಗವಶೋಪಜಾತ ಸುಕೃತೋದ್ರೇಕ ಸ್ಫುರನ್ನಿರ್ಮಲ-ಜ್ಞಾನಾಪಾಸ್ತ ಸಮಸ್ತ ಮೋಹಮಹಿಮಾ ಲೀನೇಪರೇಬ್ರಾಹ್ಮಣಿ.**

"ಭೂತಾಯಿ, ತಾತ ವಾಯು, ಮಿತ್ರ ತೇಜ, ಬಂಧು ಜಲ, ಸಹೋದರ ಆಕಾಶ—ನಿಮ್ಮೆಲ್ಲರಿಗೂ ಕೈಜೋಡಿಸಿ ಅಂತಿಮ ಪ್ರಣಾಮ ಮಾಡುತ್ತೇನೆ. ನಿಮ್ಮ ಸತ್ಸಂಗದಿಂದ ಉತ್ಪನ್ನವಾದ, ಸತ್ಕರ್ಮದಿಂದ ದೊರೆತ ನಿರ್ಮಲಜ್ಞಾನದಿಂದ ನನ್ನ ಮೋಹವೆಲ್ಲಾ ಹೊರಟೇ ಹೋಯಿತು. ನಾನು ಪರಬ್ರಹ್ಮದಲ್ಲಿ ಶಾಶ್ವತವಾಗಿ ಲೀನವಾಗುವೆನು."

ನೆರೆದಿದ್ದ ಜನ ಪ್ರತ್ಯುತ್ತರವಾಗಿ ಜಯಧ್ವನಿ ಮಾಡಿದರು. ಗೋಪುರಿಯ ಗುಡಿಸಿಲಲ್ಲಿದ್ದ ಜಮನಾಲಾಲರ ಹಸು 'ಅಂಬಾ' ಎಂದು ತನ್ನ ಸಮ್ಮತಿ ಸೂಚಿಸಿತು. ಜಮನಾಲಾಲರ ಶರೀರದಲ್ಲಿದ್ದ "ಭೂಮಾತೆ" ಪೃಥ್ವಿಯಲ್ಲಿ ಲೀನವಾದಳು. "ತಾತ ವಾಯು" ವಾಯುವಿನಲ್ಲಿ; "ಮಿತ್ರ ತೇಜಸ್ಸು" ತೇಜಸ್ಸಿನಲ್ಲಿ; "ಬಂಧು ಜಲ" ಜಲದಲ್ಲಿ; "ಸಹೋದರ ಆಕಾಶ" ಆಕಾಶದಲ್ಲಿ ಲಯವಾಯಿತು. ನಿಜ ಜಮನಾಲಾಲರು ಜನತಾ-ಬ್ರಹ್ಮ ದಲ್ಲಿ ಲೀನವಾದರು.

ಶಾಸ್ತ್ರಿಗಳ ವೇದ ಪಾರಾಯಣ ಮುಗಿಯಿತು. ಪುನಃ ನೀರವತೆ ಆವರಿಸಿತು. "ಒಳ್ಳೆಯದು, ಹಿಂದಿರುಗಿ" ಎಂದರು ಗಾಂಧೀಜೀ. ನಾನು ನಿಟ್ಟುಸಿರು ಬಿಟ್ಟೆ. ಮನಸ್ಸಿನಲ್ಲೇ ಅಂದುಕೊಂಡೆ.

**" ನ ಜಾನೆ ಸಂಸಾರಃ ಕಿಮಮೃತಮಯಃ ಕಿಂ ವಿಷಮಯಃ "**

# ಗಾಂಧೀ ಸಾಹಿತ್ಯ

ಗಾಂಧೀ ವಿಚಾರ ಸರಣಿಯನ್ನು ಕನ್ನಡದ ಜನರಿಗೆ ತದ್ವತ್ತಾಗಿ ಒದಗಿಸಿಕೊಡುವ ಗ್ರಂಥಮಾಲೆ. ಅತ್ಯುತ್ತಮ ಭಾಷಾಂತರಗಳೆಂದು ಎಲ್ಲರಿಂದಲೂ ಮೆಚ್ಚುಗೆ ಪಡೆದಿದೆ.

## ಇದುವರೆಗೆ ಪ್ರಕಟವಾದ ಗ್ರಂಥಗಳು

| | |
|---|---|
| ಪ್ರಸಾದದೀಕ್ಷೆ | ೧ ೪ ೦ |
| ದಿನಚರಿಯ ಕೆಲವು ಪುಟ | (ತೀರಿದೆ) |
| ಸಂವಾದಮಾಲೆ | (ತೀರಿದೆ) |
| ಗಾಂಧೀ ಕತೆಗಳು | ೧ ೪ ೦ |
| ದಕ್ಷಿಣ ಆಫ್ರಿಕದಲ್ಲಿ ಸತ್ಯಾಗ್ರಹ (೩ ಭಾಗ) | ೩ ೦ ೦ |

---

## ಮುಂದಿನ ಪುಸ್ತಕಗಳು

ನನ್ನ ಜೊತೆಗಾರರು

ವಿನೋಬಾ ವಿಚಾರಲಹರಿ

ಪ್ರಾರಂಭಜೀವನ

---

ಗಾಂಧೀಸಾಹಿತ್ಯ ಭಂಡಾರ

ಬೆಂಗಳೂರು

**ಹೊಸ ವಿಚಾರ !** **ಹೊಸ ಬೆಳಕು !!** **ವಿವಿಧ ಸಾಹಿತ್ಯ !!!**

# ಪ್ರಭಾತ ಸಾಹಿತ್ಯ

ಬೆಂಗಳೂರು

ಪೆಂಗ್ವಿನ್-ಪೆಲಿಕಾನ್ ಪುಸ್ತಕಗಳ ಆಕಾರ

ಮೊದಲನೆಯದು

**ಇನ್ನು ಸಾಕು**

೨. **ಲೂಯಿ ಫಿಷರ್—ಭಾರತ ಸಮಸ್ಯೆ**

೦. **ಜವಾಹರಲಾಲರ ಜಗತ್ಕಥಾವಲ್ಲರಿ**—ಭಾಗ ೧

೪. **ಡಾ॥ ಪಟ್ಟಾಭಿಯವರ—ಹಿಂದೂ ಕುಟುಂಬ**

೫. **ನಿಪ್ಪೋನ್ ಜೀನ್**

೬. **ಶಿಕ್ಷಣ ಪ್ರಯೋಗಗಳು**

೭. **ಜವಾಹರಲಾಲರ ಜಗತ್ಕಥಾವಲ್ಲರಿ**—ಭಾಗ ೨.

**ಸಿದ್ದವನಹಳ್ಳಿ ಕೃಷ್ಣಶರ್ಮ**
ಬೆಂಗಳೂರು

## ಆಶೀರ್ವಾದ

ಬಹಳ ಉಚ್ಚ ದರ್ಜೆಯ ಭಾಷಾಂತರವಿದು. ಓದುವವರಿಗೆ ಭಾಷಾಂತರವೆಂದು ಗೊತ್ತಾಗುವುದಿಲ್ಲ. ಶ್ರೀ|| ಶ್ರೀನಿವಾಸಮೂರ್ತಿಗಳು ಅನೇಕ ಸೂಕ್ಷ್ಮ ಭಾವನೆಗಳನ್ನು ಸುಲಭ ಶೈಲಿಯಲ್ಲಿ ತಿಳಿಸಿದಾರೆ. ಯಾರಿಗೇ ಆಗಲಿ ಈ ಪುಸ್ತಕವನ್ನು ಪ್ರಾರಂಭ ಮಾಡಿದ ಅನಂತರ ಮಧ್ಯೆ ನಿಲ್ಲಿಸುವುದಕ್ಕಾಗುವುದಿಲ್ಲ. ಪೂರೈಸಿದ ಅನಂತರ ಸಮಯವನ್ನು ಸದುಪಯೋಗಪಡಿಸಿದೆನೆಂಬ ಭಾವನೆಯೂ ಮನಸ್ಸಿಗೆ ತೃಪ್ತಿಯೂ ಉಂಟಾಗುತ್ತೆ. ಈ ಪುಸ್ತಕ ಕನ್ನಡಿಗರ ಮೆಚ್ಚಿಗೆಗೆ ಪಾತ್ರವಾಗುವುದು ಖಂಡಿತ.

ತಾ. ೯-೧೦-೧೯೪೩
ಸೆಂಟ್ರಲ್ ಜೈಲು
ಬೆಂಗಳೂರು

**ಟಿ. ಸುಬ್ರಹ್ಮಣ್ಯ**
ಅಧ್ಯಕ್ಷ
ಮೈಸೂರು ಕಾಂಗ್ರೆಸ್

---

**ಬೆಲೆ ೦—೧೨—೦**

Photos printed at Art Litho Press, Bangalore City.
Printed by U. N. Mallya, Proprietor, B. B. D. Power Press, Cottonpet, Bangalore City.